# ಕೊರವಂಜಿ

ಜೂನ್ ೧೯೪೭



ಸಂಪಾದಕರು:
ಶ್ರೀ. ರಾ. ಶಿ.

ಸಲಹೆಗಾರರು:
ಶ್ರೀ. ನಾ. ಕಸ್ತೂರಿ

ಚಿತ್ರಕಾರರು:
ಶ್ರೀ. ಆರ್. ಕೆ. ಲಕ್ಷ್ಮಣ್



ಬಿಡಿಪತ್ರಿಕೆ
ಎರಡಾಣೆ.

ತಿಳಿನಗೆಯ
ಮಾಸ ಪತ್ರಿಕೆ

# ಕೊ ರ ವ ಂ ಜಿ

ಕೊರವಂಜಿಯು ಪ್ರತಿ ತಿಂಗಳ ಪಾಡ್ಯವೂ ಹೊರಬೀಳುವುದು.

ತಿಳಿ ಹಾಸ್ಯದ ಲೇಖನಗಳು, ಹರಟೆಗಳು, ಅಣಕವಾಡುಗಳು, ಇವುಗಳಿಗೆ ಸರ್ವದಾ ಸುಸ್ವಾಗತವುಂಟು. ಆದರೆ ವ್ಯಕ್ತಿಯನ್ನು ದ್ವೇಷಿಸಿ ಬರೆದ ಲೇಖನಗಳಿಗೆ ಎಡೆಯಿಲ್ಲ.

ಸಂಪಾದಕೀಯ ಪತ್ರ ವ್ಯವಹಾರಗಳನ್ನು ಸಂಪಾದಕರು. ನಂ. ೧, ವೆಂಕಟ ರಂಗೈಯ್ಯಂಗಾರ್ ರಸ್ತೆ, ಮಲ್ಲೇಶ್ವರ, ಬೆಂಗಳೂರಿನಲ್ಲಿ ನಡೆಸಬೇಕು.

ವ್ಯವಸ್ಥಾಪಕರಲ್ಲಿ ಮಿಕ್ಕ ವಿಷಯಗಳನ್ನು ಪ್ರಸ್ತಾಪಿಸಬೇಕು.

ವ್ಯವಸ್ಥಾಪಕರು,

೨೮–ಎ, ಲಾಲ್‌ಬಾಗ್ ರೋಡ್, ಬೆಂಗಳೂರು ಸಿಟಿ.

**ವಾರ್ಷಿಕ ಚಂದಾ ರೂ. 1-8-0** **ಬಿಡಿ ಪ್ರತಿ 0-2-0**

---

## ವಿಷಯಾನುಕ್ರಮಣಿಕೆ

# ಕೊರವಂಜಿ

ಸಂಪುಟ ೧]　　ಜೂನ್, ೧೯೪೨　　[ಸಂಚಿಕೆ ೩

## ಕುಹ ಕಿಡಿಗಳು

ಹೆಬ್ಬಿ ಗುಬ್ಬಾಲೆಯ ಪೋಸ್ಟಾಫೀಸಿನಲ್ಲಿ ಹತ್ತು ಸಾವಿರ ಮನಿ ಆರ್ಡರ್ ಫಾರಂಗಳು ಉಪಯೋಗಿಸಲ್ಪಡುತ್ತವೆಂದು ವದಂತಿ.

—ಹೆಬ್ಬಿ ಗುಬ್ಬಾಲೆಯ ಜನರು ತಮ್ಮ ಕಾಗದಗಳನ್ನು ಬರೆಯುಲುಪಯೋಗಿಸುವ ಫಾರಂಗಳೂ ಇದರಲ್ಲೀ ಸೇರಿದೆಯೇ?

*　　*　　*

ಇನ್ನು ಮುಂದೆ ರಬ್ಬರಿನಿಂದ ರೂಪಾಯಿಗಳನ್ನು ಮಾಡುತ್ತಾರೆಂದು ಕೇಳುತ್ತೇವೆ. ಹೌದು ಆಗ ಛಂಗಿಸಿದರೆ ಪುಟ ಹೊಡೆದು ಬರುತ್ತವೆ.

—ಅಲ್ಲದೆ ಈಗಾಗಲೇ ರಬ್ಬರಿನ ಚಕ್ಕುಗಳನ್ನು ನೋಡಿದ್ದೇವಲ್ಲಾ. ಬ್ಯಾಂಕಿಗೆ ಕಳಿಸಿದರೆ ಪುಟ ಹೊಡೆದು ಹಿಂದೆ ಬರುವುವು.

*　　*　　*

ವೀಣೆಯು ವೇದಗಳು ಹುಟ್ಟಿದ ಕಾಲದಲ್ಲೇ ಹುಟ್ಟಿತೆಂದು ಅರಿತವರ ಅಭಿಪ್ರಾಯ.

—ಅಂದ ಮೇಲೆ ಹಾರ್ಮೋನಿಯಮ್ಮು ಸಿಪಾಯಿ ದಂಗೆಯ ಕಾಲದಲ್ಲಿ ಅವತರಿಸಿತೇ?

*　　*　　*

ಹಿಂದೂಸ್ಥಾನದ ಐಕಮತ್ಯಕ್ಕೆ ಚಲನ ಚಿತ್ರಗಳು ಬಹಳ ಸಹಕಾರಿ ಎಂದು ಹಲವರು ಹೇಳುತ್ತಾರೆ.

—ಹೌದು. ಕರ್ನಾಟಕೀಯ ಹಾಡುಗಳನ್ನು ಹಿಂದೂಸ್ಥಾನಿ ಮಟ್ಟಿನಲ್ಲಿ ಹಾಡಿ ಐಕಮತ್ಯಸಾಧಿಸಿಲ್ಲವೇ ?

*　　*　　*

ನಂಜನಗೂಡಿನ ನದಿಯ ದಡದಲ್ಲಿ ಹೋಗುತ್ತಿದ್ದ ಯಾತ್ರಿಕನಿಗೆ ಒಂದು ಮುತ್ತು ಸಿಕ್ಕಿತಂತೆ.

—ಮುತ್ತು ಒಬ್ಬನಿಗೆ ಹೇಗೆ ಸಿಗುತ್ತೆ, ಇಬ್ಬರಿಗೆ ಸಿಗಬೇಕಲ್ಲವೇ. ?

ನಾಲ್ಕು ಪಿಕಾಸಿಗಳ ಕಳುವು ಆಗಿದೆಯಂತೆ ನಮ್ಮ ಷಹರಿನಲ್ಲಿ.

—ಅಂದಮೇಲೆ ಈ ಗೋಕುಲಾಷ್ಟಮಿ ಉಂಡೆಗಳು ಇನ್ನೂ ಮುಗಿದಿಲ್ಲ.

* * *

ಕಬ್ಬನ್ ಪಾರ್ಕಿನಲ್ಲಿ ಮೊನ್ನೆ ಒಂದು ಜಟಕಾ ಗಾಡಿಯು ಮೂರು ಪಲ್ಟಿ ಹೊಡೆಯಿತಂತೆ.

—ಕಬ್ಬನ್ ಪಾರ್ಕಿನ ವಾತಾವರಣ ಅಷ್ಟು ಚೇತನಕಾರಿ.

* * *

ಕೆಲವು ದಿನಗಳ ಹಿಂದೆ ನಮ್ಮೂರಿನಲ್ಲಿ ನಾಲ್ಕಾರು ಜನರನ್ನು ಕಚ್ಚಿದ ಹುಚ್ಚು ನಾಯಿ ತಪ್ಪಿಸಿಕೊಂಡು ಓಡಿಹೋಯಿತು.

—ಈಗ ಅದು ಪತ್ರಿಕೆಯೊಂದರಲ್ಲಿ ವಿಮರ್ಶಕನಾಗಿ ಕೆಲಸ ಮಾಡುತ್ತಿದೆ ಯೆಂಬುದು ಶುದ್ಧ ಸುಳ್ಳು.

* * *

ಮೊನ್ನೆ ಒಂದು ಕುಸ್ತಿ ಪ್ರದರ್ಶನ ನೋಡಿದಾಗ ನಮ್ಮ ಗಾದೆಯ ಸತ್ಯತೆಯು-ಮನಗಂಡಿತು.

—ಜುಟ್ಟಿಲ್ಲದ ಜಟ್ಟಿ ಜಯಿಸಿಕೊಂಡು ಬಂದ.

* * *

ನಮ್ಮ ರಾಜಕಾರಣ ಪಟುವಿಗೆ ಎಳೆಯ ಮಕ್ಕಳನ್ನು ಕಂಡರೆ ಬಲು ಪ್ರೇಮ ವಂತೆ.

—ನಮ್ಮ ರಾಜಕಾರಣ ಪಟುಗಳಿಗೆ ಕಿವಿ ಸ್ವಲ್ಪ ಮಧ್ಯಸ್ಥ.

* * *

ರಷ್ಯಾ ದೇಶದಲ್ಲಿ ಎಲ್ಲರೂ ಕೆಲಸ ಮಾಡಬೇಕು ಇಲ್ಲವೇ ಉಪವಾಸ ಸಾಯ ಬೇಕಂತೆ.

—ನಮ್ಮೂರಿನಲ್ಲಿ ಎರಡೂ ಮಾಡಬೇಕು.

* * *

ನಿನ್ನೆಗಿಂತ ಇವತ್ತು ಒಳ್ಳೆಯ ದಿನ ಎಂದು ನಮ್ಮ ಸಹಪತ್ರಿಕೆಯವರ ಹೇಳಿಕೆ.

—ಕೊರವಂಜಿಯು ಇವತ್ತು ಪ್ರಕಟವಾಗಿದೆಯೆಂದು ಮಾತ್ರ ನಾವು ಹೇಳ ಬಲ್ಲೆವು.

* * *

ಕವಿ ಸಾರ್ವಭೌಮರೋರ್ವರು ಬೆಟ್ಟದ ಮೇಲೆ ಪದ್ಯಗಳನ್ನು ಬರೆಯುತ್ತಾರಂತೆ.

—ಕಾಗದ ದುಬಾರಿಯಾದ ಈ ಕಾಲದಲ್ಲಿ ಇದು ಬಹಳ ಒಳ್ಳೆಯ ಪದ್ಧತಿ ಯಲ್ಲವೇ?

# ಚೌ - ಚೌ

“ಬೆಂಕಿ ಅನಾಹುತಗಳಾಗದೆ ಇರಲು ಯಾವುದು ಒಳ್ಳೆಯ ಉಪಾಯ?” ಈಗಿನ ಸೌದೆಯ ಬೆಲೆಯೇ ಸಾಕಾಗಿದೆ.

೨

ಕಳೆದವಾರ ಮಲ್ಲೇಶ್ವರದಲ್ಲಿ ನಡೆದ ವಿಮಾನಧಾಳಿ ಮುಂಜಾಗ್ರತೆ ಅಭ್ಯಾಸದ ಸಂದರ್ಭದಲ್ಲಿ ಏರುತಗ್ಗಿನ ಸಿಳ್ಳು ಕೇಳಿದ ಕೂಡಲೇ ಗುಣಿಗಿಳಿದ ಮೂರು ಜನ ಬುದ್ಧಿವಂತರು ಮೇಲಕ್ಕೆ ಬರಬಹುದೆಂಬ ಸೂಚನೆಗಾಗಿ ಇನ್ನೂ ಕಾಯುತ್ತಿರುವ ರಂತೆ. ಏರುತಗ್ಗಿಲ್ಲದ ಸಿಳ್ಳನ್ನು ಆಗಲೇ ಕೊಡಲಾಯಿತು ಅಂದರೆ ಅವರು ನಂಬುತ್ತಿಲ್ಲ. ತಮ್ಮ ಕಿವಿಗೆ ಬೀಳದೆ ಇದ್ದ ಮೇಲೆ ಅದೆಂತಹ ಸಿಳ್ಳು ಅಂತ ಗುಣಿಯೊಳಗಿಂದಲೇ ವಾದಿಸುತ್ತಿದಾರೆ.

೩

‘ಇಂಗ್ಲೆಂಡಿನಹಾಗೆಯೇ ಇಂಡಿಯಾದಲ್ಲೂ ಒಂದು ಪಾರ್ಲಿಮೆಂಟು ಏಕೆ ಇರಬಾರದು?’ ಎಂದು ಒಂದು ಬ್ರಿಟಿಷ್ ವೃತ್ತ ಪತ್ರಿಕೆ ಕೇಳುತ್ತದೆ. ಬಾಲ ಕಳೆದುಕೊಂಡ ನರಿ ಎಲ್ಲರಿಗೂ ಬೋಧನೆ ಮಾಡಿತಂತೆ ‘ಕತ್ತರಿಸಿ ಕೊಳ್ಳಿರೋ,’ ಎಂದು.

೪

“ರೆಯಿಲು ಪ್ರಯಾಣದ ದರಗಳು ಹೀಗೆ ದಿನದಿನಕ್ಕೂ ಹೆಚ್ಚುತ್ತಿರುವಾಗ ನಾವು ಸುಮ್ಮನೆ ಹಾಯಾಗಿ ಕುಳಿತುಕೊಳ್ಳಲಾಗುವುದಿಲ್ಲ” ಎಂದು ಒಬ್ಬರು ಬರೆಯುತ್ತಾರೆ. ದರಗಳು ಈಗಿನದಕ್ಕಿಂತ ಕಡಿಮೆಯಿದ್ದಾಗಲೇ ನಾವು ರೆಯಿಲಲ್ಲಿ ಒಂದು ದಿನವೂ ಹಾಯಾಗಿ ಕುಳಿತಿಲ್ಲ!

೫

ತಮ್ಮ ಟ್ರಂಕು ಹಾಸಿಗೆಗಳನ್ನು ರೆಯಿಲು ಸ್ಟೇಷನ್ ಆಚೆಗೆ ಹೊತ್ತುತಂದ



ಪೋರ್ಟರ್ ಮಹಾಶಯ ಕೇವಲ ಹೇಳಿದಷ್ಟು ಕೂಲಿಯನ್ನು ಮಾತ್ರ ತೆಗೆದು

ಕೊಂಡು ತಲೆ ಕೆರೆಯದೆ ಹೊರಟಾಗ ಮೂರ್ಛೆಹೋದ ಪುಷನೀಯರಿಗೆ ಈಗ ಕೊಂಚ ವಾಸಿಯಂತೆ.

೬

ನಮ್ಮ ಭೂಮಿ ಇನ್ನೂ ಒಂದು ಲಕ್ಷ ವರ್ಷಗಳೊಳಗೆ ಪುಡಿ ಪುಡಿಯಾಗಿ ಬಿಡುತ್ತದೆ ಎಂದು ಕೆಲವು ಭೂಶಾಸ್ತ್ರಜ್ಞರು ಹೇಳುತ್ತಿರುವರು. ಕನ್ನಡ ಚಲನ ಚಿತ್ರವೊಂದರ ಕೋಟಿವಾರ ಮಹೋತ್ಸವವನ್ನು ನೆರವೇರಿಸಲು ಕುತೂಹಲರಾಗಿರುವ ಕಂಪೆನಿಯವರಿಗೆ ಇದರಿಂದ ತುಂಬಾ ಆಶಾಭಂಗವಾಗಿದೆ.

೭

ನಮ್ಮ ದೇಶದ ಪ್ರಮುಖ ಕೋಮು ನಾಯಕರೊಬ್ಬರು ಚಿಕ್ಕಂದಿನಲ್ಲಿ ನಾಟಕದ ಕಂಪನಿ ಸೇರ ಬೇಕೆಂದಿದ್ದರಂತೆ. ಆಗ ಅವರನ್ನು ತಡೆದು ನಿರೋಧಿಸಿದ ಮೇಷ್ಟರ ಹೆಸರನ್ನು ಈಗ ಯಾರಿಗೂ ಹೇಳುವಹಾಗಿಲ್ಲ. ಏಕೆಂದರೆ, ಹೇಳಿಬಿಟ್ಟರೆ ಮೇಷ್ಟರಿಗೆ ತುಂಬಾ ಅಪಾಯ!

೮

ಮೊನ್ನೆ ಒಂದು ಎತ್ತಿನ ಗಾಡಿಯ ಹಿಂಭಾಗಕ್ಕೆ ಇದ್ದಲು ಬಸ್ಸೊಂದು ಢಿಕ್ಕಿ ಹೊಡೆಯಿತು. "ಅಷ್ಟು ಜೋರಾಗಿ ನಿನ್ನ ಬಸ್ಸು ಹೇಗೆ ಹೋಯಿತು?" ಎಂದು ಮ್ಯಾಜಿಸ್ಟ್ರೇಟರು ಕೇಳಿದರು. ಅದಕ್ಕೆ ಆ ಡ್ರೈವರು, "ಸ್ವಾಮಿ! ಎತ್ತುಗಳಿಗೆ ಲಾಳ ಇರಲಿಲ್ಲ!" ಅಂದ.

೯

'ಎರಡನೆಯ ನಾಗದತ್ತ ಎಂಬ ಕನ್ನಡ ಕವಿ ಯಾವಾಗ ಜನಿಸಿದ ಎಂಬ ಒಂದು ಪ್ರಶ್ನೆಯನ್ನು ಈ ಸಾರಿ ಪರೀಕ್ಷೆಗೆ ಕೊಡಲಾಗಿತ್ತು. 'ಏಕೆ?' ಎಂದು ಕೇಳಿದ್ದರೆ ಆತನ ವಿಷಯವಾಗಿ ವಿದ್ಯಾರ್ಥಿಗಳ ನಿಜಾಭಿಪ್ರಾಯವನ್ನು ತಿಳಿದುಕೊಳ್ಳಬಹುದಾಗಿತ್ತು.

೧೦

ಮೊನ್ನೆ ದೆಹ್ಲಿ ಆಸ್ಪತ್ರೆಯೊಂದರಲ್ಲಿ ಹುಟ್ಟಿದ ಒಂದು ಮಗುವಿಗೆ ಕ್ರಿಪ್ಸ್ ಎಂದು ಹೆಸರಿಡಲು ತೀರ್ಮಾನಿಸಿರುವರಂತೆ. ಪಾಪ! ಆ ಮಗುವಿಗೆ ಈ ಸಮಾಚಾರವನ್ನು ತಿಳಿಸದೆ ಇರುವುದೇ ಮೇಲು.

೧೧

ಹಾರ್ಮೋನಿಯಮ್ಮಿನ ಸದ್ದನ್ನು ಮೀರಿಸುವಂತೆ ಕೂಗುವ ಒಂದು ಕಪಿಯನ್ನು ಈಗ ಹೊಸದಾಗಿ ಮೃಗಾಲಯಕ್ಕೆ ತಂದಿರುವರಂತೆ. ಇನ್ನು ಮುಂದೆ ಆಗಾಗ ಅಲ್ಲಿಗೆ ಹೋಗಿ ಅದಕ್ಕೆ ಕಡಲೆಕಾಯಿ ಕೊಡಬೇಕು.

---

ಅಂತರ್ರಾಷ್ಟ್ರ ವೈದ್ಯರ ಸಮ್ಮೇಳನದಲ್ಲಿ ವಿಮಾನ ಧಾಳಿಗಳು ಬಹಳ ಅನ್ಯಾಯವೆಂದು ಠರಾವು ನಡೆಯಿತಂತೆ.

—ಅಲ್ಲವೇ ? ತಾವು ಮಾಡುವ ಕೆಲಸವನ್ನು ವಿಮಾನ ಧಾಳಿಗಳು ಮಾಡಬಹುದೇ ?

# ರಾಜೀವಪುರದ ರಾಜಕೀಯ

## 'ಸಿವಿಲ್ ಸರ್ವಿಸ್'

ರಾಜೀವಪುರದಲ್ಲಿ ಒಂದು ಹಳೆಯ ನಗೆಪಾಟಲು ಕತೆಯುಂಟು. ಒಬ್ಬ ಯುವಕನು ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತೀರ್ಣನಾಗದೆ ಕೆಲಸ ಹುಡುಕಲು ಆರಂಭಿಸಿದನಂತೆ. ದೊಡ್ಡ ಹುದ್ದೆದಾರರಲ್ಲಿ ಹೋಗಿ ತನ್ನ ಗೋಳು ಹೇಳಿಕೊಂಡನಂತೆ. ತನ್ನ ಸಂಸಾರದ ಭಾರವನ್ನು ತಾನೊಬ್ಬನೇ ಹೊರಬೇಕೆಂದೂ, ದೊಡ್ಡ ಹುದ್ದೆದಾರರು ದಯಮಾಡಿ ಕೆಲಸಕೊಡಿಸಿದರೆ ತನ್ನ ಸಂಸಾರವೂ ತಾನೂ ಉಪವಾಸದಿಂದ ಪಾರಾಗುವರೆಂದೂ, ಇತೋಪ್ಯತಿಶಯವಾಗಿ ಹುದ್ದೇದಾರರು ಚೆನ್ನಾಗಿ ಬಾಳಲೆಂದು ದೇವರಲ್ಲಿ ದಿನಾಲೂ ಮೊರೆಯಿಡುವೆನೆಂದೂ ಹೇಳಿಕೊಂಡನು. ಹುದ್ದೇದಾರರು ಮನಕರಗಿ ಕೇಳಿದರಂತೆ ನಿನಗೇನು ಪ್ಯಾಸಾಗಿದೆ ಎಂದು ಎಸ್.ಎಸ್.ಎಲ್.ಸಿ. ತನಕ ಓದಿದ್ದೇನೆಂದು ಹೇಳಿದನು.

"ಇನ್ನೇನಾದರೂ ವೃತ್ತಿಶಿಕ್ಷಣ ಉಂಟೆ."

"ಇಲ್ಲ."

"ಕಷ್ಟತರವಾದ ಕೆಲಸಮಾಡಲು ದೇಹದಾರ್ಢ್ಯವಿದೆಯೋ"

"ಇಲ್ಲ. ಆಗಾಗ್ಗ್ಯೆ ಕರುಳು ಬೆದರುತ್ತೆ ನನಗೆ"

"ಮನೆಗೆಲಸ ನೋಡಲು ಬರುತ್ತೆಯೇ."

"ಇಲ್ಲ."

"ನೋಡಪ್ಪಾ ನಿನಗೇನೂ ಬಾರದು. ಅಂದಮೇಲೆ ನೀನು ನಮ್ಮ ಸರ್ಕಾರದ ಸಿವಿಲ್ ಸರ್ವಿಸ್ಸಿಗೆ ಸೇರಬೇಕೆ ವಿನಹಾ ಇನ್ನು ಯಾವ ಜವಾಬ್ದಾರಿ ಕೆಲಸವೂ ನಿನ್ನಿಂದ ಸಾಗದು. ಆ ಕೆಲಸ ಕೊಡಲು ನನಗೆ ಶಕ್ತಿಯಿಲ್ಲ. ಶ್ರೀಮನ್ಮಹಾರಾಜರನ್ನೇಹೋಗಿ ಕೇಳಿಕೊ"

ಹೀಗೆಂದು ಯುವಕನನ್ನು ಬೀಳ್ಕೊಟ್ಟರಂತೆ.

ಇದನ್ನು ಕೇಳಿದಮೇಲೆ ಈ ರಾಜೀವಪುರದ ಸಿವಿಲ್ ಸರ್ವಿಸ್ ವ್ಯವಸ್ಥೆಯನ್ನು ತಿಳಿಯಲೇಬೇಕೆಂಬ ಹಂಬಲು ಹತ್ತಿತು. ಯಾವ ಕೆಲಸಕ್ಕೂ ಅನರ್ಹನಾದವನು ಇಲ್ಲಿ ಉದ್ಧಾರವಾಗಬೇಕಾದರೆ ಏನುಕಾರಣ ತಿಳಿಯಬೇಕೆಂಬ ಆ ಕುತೂಹಲವು ಹೆಚ್ಚಾಯಿತು. ಹಾಗಾಗಿ ಆ ಸಿವಿಲ್ ಸರ್ವಿಸ್ಸಿನವನೊಬ್ಬನ ನೌಕರನ ಸ್ನೇಹ ಮಾಡಿದೆ. ಅವನ ಹಿಂದೆ ಮುಂದೆ ಸುತ್ತಿ, ತಿಂಡಿ ಕಾಫಿ ಕೊಡಿಸಿ, ಅವನ ವಿಶ್ವಾಸ

ಂಪಾದಿಸಿದೆ. ಕೆಲವು ದಿನಗಳಲ್ಲೇ ಅವನ ನಂಬಿಕೆಗರ್ಹನಾದೆ. ಆಗ ಸ್ವಲ್ಪಸ್ವಲ್ಪ ವಾಗಿ ಅವನಿಂದ ಈ ಕೆಲಸದ ಸೂಕ್ಷ್ಮವನ್ನೆಲ್ಲಾ ತಿಳಿದೆ. ಚತುರತೆಯನ್ನೆಲ್ಲಾ ಅರಿತೆ. ಅದನ್ನೇ ನಿಮ್ಮ ತಿಳಿವಳಿಕೆಗೋಸ್ಕರ ಹೇಳಹೊರಟಿದ್ದೇನೆ. ಬೇರೆ ಕೆಲಸವಿಲ್ಲದಿದ್ದರೆ ಓದಿ. ಬೇರೆ ಕೆಲಸವಿದ್ದರೆ, ಕೆಲಸ ಮುಗಿಸಿಕೊಂಡು ಬಂದು ಓದಿ. ಇದೇನೂ ಅಷ್ಟು ತುರುತಿನದಲ್ಲ.

* * *

ಸಂಸ್ಥಾನವನ್ನೆಲ್ಲಾ ಹಲವಾದು ಡಿಸ್ಟ್ರಿಕ್ಟ್‌ಗಳಾಗಿ ವಿಂಗಡಿಸಿದ್ದಾರೆ. ಒಂದೊಂದು ಡಿಸ್ಟ್ರಿಕ್ಟೂ ಹಲವಾರು ತಾಲ್ಲೂಕುಗಳಾಗಿ ಭಾಗವಾಗಿದೆ. ಒಂದೊಂದು ತಾಲ್ಲೂಕು ಹಲವು ಹಳ್ಳಿಗಳಿಂದ ಕೂಡಿದೆ. ಈ ಹಳ್ಳಿಗಳ ಆಡಳಿತವೆಲ್ಲವೂ 'ಹಳ್ಳಿದಾರ' ಎಂಬ ಅಧಿಕಾರಿಗೆ ಸೇರಿದ್ದು. ತಾಲ್ಲೂಕಿನ ಹಳ್ಳಿಗಳ ಹಳ್ಳಿದಾರರೆಲ್ಲಾ ತಾಲ್ಲೂಕದಾರನೆಂಬ ಅಧಿಕಾರಿಯ ಆಡಳಿತಕ್ಕೆ ಸಂಬಂಧಪಟ್ಟವರು. ಈ ತಾಲ್ಲೂಕದಾರರೆಲ್ಲಾ ಡಿಸ್ಟ್ರಿಕ್ಟ್ ದಾರರೆಂಬವರ ಕೈಕೆಳಗೆ ಕೆಲಸಮಾಡುವವರು, ಡಿಸ್ಟ್ರಿಕ್ಟ್‌ದಾರರೆಲ್ಲಾ ಸರಕಾರದ ಮಂತ್ರಿಮಂಡಲದ ಆಳ್ವಿಕೆಗೆ ಒಳಪಟ್ಟವರು. ಇದೇ ಸರಕಾರದ ಸ್ಥೂಲ ರಚನೆ.

ಒಂದು ಹಳ್ಳಿಯಲ್ಲಿ ಕೆರೆಯ ನೀರು ಬತ್ತಿಹೋಗಿದೆ ಎನ್ನಿ. ಅವರುಗಳು ನೀರಿಗೋಸ್ಕರ ಕೆರೆಯಂಗಳದಲ್ಲಿ ದೊಡ್ಡ ಭಾವಿಯೊಂದನ್ನು ತೋಡಬೇಕೆನ್ನಿ. ಆಗ ಸರಕಾರವು ಕೆಲಸಮಾಡುವ ರೀತಿಯಾದರೂ ಹೀಗೆ. ಹಳ್ಳಿದಾರನು ತಾಲ್ಲೂಕುದಾರನಿಗೆ ಬರೆಯುವನು, ತಾಲ್ಲೂಕದಾರನು ಡಿಸ್ಟ್ರಿಕ್ಟ್‌ದಾರನಿಗೆ ಅದೇ ಕಾಗದವನ್ನು ತನ್ನ ಸಹಿಹಾಕಿ ಕಳುಹಿಸುವನು. ಡಿಸ್ಟ್ರಿಕ್ಟ್‌ದಾರನು ತಾನೂ ಸಹಿಹಾಕಿ ಮಂತ್ರಿಮಂಡಳಕ್ಕೆ ಕಳುಹಿಸುವನು. ಮಂತ್ರಿಮಂಡಳದವರೂ ತಾವೂ ಸಹಿಹಾಕಿ ಆಗಬಹುದೆನ್ನುವರು. ಸರಿ, ಪ್ರತಿಯೊಬ್ಬರೂ ಹೀಗೆ ಸಹಿಹಾಕಿ ಹಿಂದಕ್ಕೆ ಕಾಗದವನ್ನು ಕಳುಹಿಸುವರು. ಹಳ್ಳಿದಾರನ ಹತ್ತಿರ ಮರಳಿ ಬಂದಾಗ ಈ ಸಹಿಗಳ ಮಧ್ಯೆ ಹುಕುಂ ಏನಾಗಿದೆಯೆಂಬುದೇ ತಿಳಿಯುವುದಿಲ್ಲ. ಅಸ್ತಿ ಎಂದರೊ, ನಾಸ್ತಿ ಎಂದರೊ ಗೊತ್ತಾಗುವುದಿಲ್ಲ. ಆದರೆ ಹಳ್ಳಿದಾರನೇನೋ ಭಾವಿಯನ್ನು ತೋಡಿಸಿಯೇ ಬಿಡುವನು. ಹಣಕ್ಕೆ ಎಂದು ಕಾಗದ ಬರೆದಾಗ ಮಂತ್ರಿಮಂಡಲಿಯವರ ಹುಕುಂ ಇಂತಹ ನಂಬರಿನದು ಎಂದು ಸೂಚನೆ ಕೊಡುವನು. ಹಣದ ಇಲಾಖೆಯಲ್ಲಿ ಈ ಹುಕುಮನ್ನು ನೋಡುತ್ತಾರೆಯೇ? ಹಳ್ಳಿದಾರನು ಸುಳ್ಳು ಯಾಕೆ ಹೇಳುತ್ತಾನೆ ಎಂದಂದುಕೊಂಡು ಹಣವನ್ನು ಪಾವತಿಮಾಡುವರು. ಹಳ್ಳಿದಾರನ ವೈರಿ ಯಾರಾದರೂ ಹಣದ ಕಛೇರಿಯಲ್ಲಿದ್ದರೆ, ಆ ಹುಕುಮಿನ ಸಹಿ ಸರಿಯಾಗಿಲ್ಲವೆಂದು ಕಾಗದವನ್ನು ಹಿಂದಕ್ಕೆ

ಕಳುಹಿಸುವನು. ಅಂದಮೇಲೆ ಈ ಕಾಗದದ ಪ್ರಯಾಣ ತಿರುಗಿ ಆರಂಭ. ಅಂದರೆ ಹಣ ಪಾವತಿಯಾಗಬೇಕಾದರೆ ಇನ್ನೊಂದು ಸಂವತ್ಸರ.

ಈ ಕಾಗದಗಳನ್ನೆಲ್ಲಾ ಸಾವಧಾನವಾಗಿ ಪರೀಕ್ಷಿಸಿ ಹುಕುಂಮಾಡಲು ಯಾವ ಅಧಿಕಾರಿಗೂ ಅಸಾಧ್ಯ. ಅವನು ತನ್ನ ಹತ್ತಿರ ಕೆಲವು ನೌಕರರನ್ನಿಟ್ಟುಕೊಂಡಿರುತ್ತಾನೆ. ಅವರುಗಳು ಇದೆಲ್ಲವನ್ನೂ ಓದಿ ತಮಗೆ ತೋಚಿದ ಹುಕುಮನ್ನು ಬರೆಯುತ್ತಾರೆ. ಅನುಭವಸ್ಥ ನೌಕರನು ಬರೆದುದನ್ನು ಎಳೆ ತಾಲ್ಲೂಕದಾರನು ನಂಬಿ ತಾನೂ ಸಹಿ ಹಾಕುತ್ತಾನೆ. ಈ ತಾಲ್ಲೂಕದಾರನ ಕೆಲಸ ಮತ್ತು ಅಂತಸ್ತಿನ ಮೇಲಿನ ಕೆಲಸಗಳೆಲ್ಲಾ 'ಸಿವಿಲ್ ಸರ್ವಿಸ್' ಎಂದು ಕರೆಸಿಕೊಳ್ಳುವುದು. ಸಿವಿಲ್ ಸರ್ವಿಸ್ಸಿನವರ ಹೆಚ್ಚುಗಾರಿಕೆಯೆಂದರೆ ನೌಕರನ ಕುಶಲತೆ. ಅವರುಗಳ ಬುದ್ಧಿಯೆಂದರೆ ನೌಕರನ ಬುದ್ಧಿ. ಅವರುಗಳ ಸಾಮರ್ಥ್ಯವೆಂದರೆ ನೌಕರನ ಚತುರತೆ. ಅಂದಮೇಲೆ ಒಳ್ಳೆಯ ನೌಕರನನ್ನು ಪಡೆದ ಹುದ್ದೆದಾರನು ಎಂತಹ ಮೂಢನಾದರೂ ಬಾಳಬಹುದು. ಇಲಾಖೆಯಲ್ಲಿ ಒಳ್ಳೆಯ ಗಣ್ಯತೆಯನ್ನು ಪಡೆಯಬಹುದು.

ಈ ಸ್ಥೂಲ ರಚನೆಯನ್ನು ನೋಡಿದ ಮೇಲೆ ನನಗೆ ಮೊದಲ ಕತೆಯ ಸತ್ಯವು ಮನಗಂಡಿತು.

ನನ್ನ ಸ್ನೇಹಿತ ನೌಕರನು ಕೆಲಸಕ್ಕೆ ಸೇರಿ ಆರು ವರ್ಷಗಳಾಗಿದ್ದವು. ಇನ್ನೂ ಅವನನ್ನು ಖಾಯಂ ಮಾಡಿರಲಿಲ್ಲ. ಅವನನ್ನು ಕೆಲಸಕ್ಕೆ ಸೇರಿಸಿಕೊಂಡಾಗ ಆರು ತಿಂಗಳ ಕೆಲಸ ಎಂದು ಹೇಳಿದ್ದರು. ಅದಿನ್ನೂ ಮುಗಿದಿರಲಿಲ್ಲ. ಇದನ್ನೆಲ್ಲಾ ಅವನೇ ನನಗೆ ಹೇಳಿದ. "ಇದನ್ನು ಹೇಗೆ ನೀನು ಮಾಡಿದೆ" ಎಂದು ಕೇಳಿದೆ. ಅವನು "ಅದೊಂದು ದೊಡ್ಡ ಕತೆ. ಕೇಳುವುದಾದರೆ ಹೇಳುತ್ತೇನೆ" ಎಂದು ಹೇಳತೊಡಗಿದನು.

ಆರು ವರ್ಷಗಳ ಹಿಂದೆ ನಾನು ಈ ಕಛೇರಿಯಲ್ಲಿ ಒಂದು ನೌಕರನ ಕೆಲಸಕ್ಕೆ ಸೇರಿಕೊಂಡೆ. ಆಗ ನಮ್ಮ ಕಛೇರಿಗೆ ಒಂದು ಕಾಗದವು ಬಂತು. ಅದರಲ್ಲಿ, ನಮ್ಮ ಕಛೇರಿಯವರು ಚಿಲ್ಲರೆ ಖರ್ಚಿಗಾಗಿ ಇನ್ನೂರು ಮೂವತ್ತು ಚಿಲ್ಲರೆ ರೂಪಾಯಿಯನ್ನು ತೆಗೆದುಕೊಂಡಿದ್ದರೆಂದೂ ಅದು ನಿಯಮಗಳ ಪ್ರಕಾರ ಸರಿಯಲ್ಲವೆಂದೂ, ಹೆಚ್ಚಾಗಿ ತೆಗೆದುಕೊಂಡಿದ್ದ ಮೊಬಲಗು ಮೂವತ್ತು ಚಿಲ್ಲರೆ ರೂಪಾಯಿಯೆಂದೂ ಅದನ್ನು ಹಿಂದಕ್ಕೆ ಪಾವತಿಮಾಡಬೇಕೆಂದೂ ಬರೆದಿತ್ತು. ನಾನು ಹೊಸದಾಗಿ ಕೆಲಸಕ್ಕೆ ಸೇರಿಕೊಂಡಿದ್ದೆ. ಎತ್ತೆತ್ತಿ ಗೋಣಿ ಒಗೆಯುವ ಹುಮ್ಮಸ್ಸಿತ್ತು. ಆದಕಾರಣ ನಿಯಮಗಳೇನೆಂಬುದನ್ನು ಓದಿದೆ. ನಾಲ್ಕನೆಯ ನಿಯಮದ ಪ್ರಕಾರ ನಾವೇನೊ ಹೆಚ್ಚು ದುಡ್ಡು ವ್ಯಯಮಾಡಿದ್ದೆವು. ಆದರೆ ಏಳನೇ ನಿಯಮದ ಪ್ರಕಾರ ಇನ್ನೂ ಇಪ್ಪತ್ತು ರೂಪಾಯಿಗಳನ್ನು ವ್ಯಯಮಾಡಲು ನಮಗೆ ಸೌಕರ್ಯವಿತ್ತು. ಸರಿ. ಈ ಸುದ್ದಿಯನ್ನು ತಾಲ್ಲೂಕದಾರನಿಗೆ ಹೇಳಿದೆ. ಆತನು ಅದನ್ನು ವಿಶದೀಕರಿಸಿ

ಒಂದು ಕಾಗದ ಬರೆಯಿರಿ ಎಂದನು. ಅಂತೇ ನಾನೊಂದು ಕಾಗದ ಬರೆದೆ. ಅದು ಹಣದ ಕಛೇರಿಗೆ ಹೋಯಿತು. ಅಲ್ಲಿದ್ದ ನೌಕರನಿಗೆ ಏಳನೇ ನಿಯಮವು ಗೊತ್ತೇ ಇರಲಿಲ್ಲವೆಂದು ಕಾಣುತ್ತೆ. ಹಳೆಯ ನೌಕರ. ಇದೆಲ್ಲಿಯ ಗೋಳು ಎಂದು ಬೇರೆ ಕಛೇರಿಗೆ ವರ್ಗಮಾಡಿಸಿಕೊಂಡು ಹೊರಟು ಹೋದ. ಹೊಸ ನೌಕರನೊಬ್ಬನು ಆ ಕೆಲಸಕ್ಕೆ ನಿಯಮಿಸಲ್ಪಟ್ಟ. ಆತನಿಗೆ ಯಾವ ನಿಯಮಗಳೂ ತಿಳಿಯದು. ಹಾಗಾಗಿ ಅವನು ತನ್ನ ಸಾಹೇಬರ ಹತ್ತಿರಕ್ಕೇ ಈ ಕಾಗದವನ್ನು ತೆಗೆದುಕೊಂಡು ಹೋಗಿ "ಸ್ವಾಮಿ ನಾನು ಹೊಸಬ. ನನಗೆ ಈ ನಿಯಮಗಳ್ಯಾವುವೂ ಗೊತ್ತಿಲ್ಲ. ಈ ಕಾಗದಕ್ಕೆ ಏನು ಜವಾಬು ಬರೆಯಬೇಕು" ಎಂದು ಧೈರ್ಯವಾಗಿ ಕೇಳಿಯೇಬಿಟ್ಟ.

ಪಾಪ, ಸಾಹೇಬನಿಗೆ ಏನು ಗೊತ್ತು ಈ ವಿಚಾರ. ಈ ನಿಯಮಗಳು. "ಏನ್ರೀ ನೀವು ಶುದ್ಧ ಅಪ್ರಯೋಜಕರು. ನನ್ನ ಸ್ನೇಹಿತ ಶ್ರೀ........ರಾಯರ ಹತ್ತಿರ ಶ್ರೀ ಚೂಟಿಯ ನೌಕರರಿದ್ದಾರೆ. ಅವರಿಗೆ ಒಂದು ಕಾಗದ ಬರೆಯಿರಿ. ಅವರು ಒಬ್ಬ ನೌಕರನನ್ನು ಕಳುಹಿಸುತ್ತಾರೆ. ಆತ ಇದಕ್ಕೆ ಸರಿಯಾಗಿ ಉತ್ತರ ಕೊಡುತ್ತಾನೆ." ಎಂದು ಹೇಳಿದನು. ಅಂತೆಯೇ ಒಂದು ಕಾಗದವೂ ಬರೆಯಲ್ಪಟ್ಟಿತು.

ಶ್ರೀ........ರಾಯರು ಯಾರು ಗೊತ್ತೇ, ನಮ್ಮ ಸಾಹೇಬರು.

ನಮ್ಮ ಸಾಹೇಬರಿಗೆ ಈ ಕಾಗದ ಬಂದ ಕೂಡಲೇ ಅವರು ನನ್ನನ್ನೇ ಕಳುಹಿಸಿದರು. ನಾನು ಆ ಹಣದ ಕಛೇರಿಗೆ ಹೋಗಿ ತಿರುಗಿ "ಹನ್ನೊಂದನೇ ನಿಯಮದಂತೆ ನೀವು ಹೆಚ್ಚು ಹಣ ತೆಗೆದುಕೊಂಡಿದ್ದೀರಿ. ಏಳನೆ ನಿಯಮ ಇದಕ್ಕನ್ವಯಿಸುವುದಿಲ್ಲ" ಎಂದು ಬರೆದೆ. ಬರೆದನಂತರ ನನ್ನ ಕಛೇರಿಗೆ ಹಿಂತಿರುಗಿ ಬಂದೆ. ಆವೇಳೆಗೆ ನನ್ನ ಕಾಗದವೂ ಬಂದಿತ್ತು. ಈ ಕಛೇರಿಯಿಂದ ಅದಕ್ಕೆ ಉತ್ತರ ಬರೆದೆ. "ಹದಿನಾಲ್ಕನೇ ನಿಯಮದ ಪ್ರಕಾರ ಹನ್ನೊಂದನೇ ನಿಯಮವು ಇದಕ್ಕೆ ಅನ್ವಯಿಸುತ್ತೆ. ಅಂದಮೇಲೆ ನಾವು ಖರ್ಚುಮಾಡಿದ್ದು ನ್ಯಾಯಸಮ್ಮತ" ಎಂದು. ಇದಕ್ಕೆ ಉತ್ತರ ಬರೆಯಲು ತಿರುಗಿ ಆ ಕಛೇರಿಗೆ ನಾನೇ ಹೋಗಬೇಕಾಯಿತು. ಹೀಗಾಗಿ ಈ ಕಾಗದ ವ್ಯವಹಾರವೇ ಒಂದು ದೊಡ್ಡ ಪರ್ವತದಂತಾಗಿದೆ. ಇಬ್ಬರೂ ಸಾಹೇಬರುಗಳಿಗೆ ನಾನು ಮೆಚ್ಚಿಗೆಯ ನೌಕರ. ಇಬ್ಬರಿಗೂ ಇದರ ವಿಚಾರ ಏನೇನೂ ತಿಳಿಯದು. ನನ್ನ ಹೊರತು ಯಾರಿಗೂ ಗೊತ್ತಿಲ್ಲ. ಅಂದಮೇಲೆ ಇನ್ನೊಂದು ಇಪ್ಪತ್ತು ಇಪ್ಪತ್ತೈದು ವರುಷ ಈ ವ್ಯವಹಾರ ಚೂಟಿಯಾಗಿ ಮುಂದುವರಿಸಿದರೆ ನನ್ನ ಕೆಲಸ ಖಾಯಂ ಆದಂತೆಯೇ. ಈ ರೀತಿಯಲ್ಲೇ ನನ್ನ ಆರು ತಿಂಗಳ ಕೆಲಸ ಇಲ್ಲಿನವರೆಗೂ ಬೆಳೆದುಬಂದಿರುವುದು."

ಇವನ ಆತ್ಮಕತೆಯನ್ನು ಕೇಳಿದ ಮೇಲೆ ನನಗೆ ಅರ್ಥವಾಯಿತು, ಲೇಖನಿಯ ಶಕ್ತಿ. ಕಾಗದದ ಯುಕ್ತಿ. ಕಾರ್ಯದ ಮುಕ್ತಿ.......................................... ನೌಕರನ ಭುಕ್ತಿ.

# "ತುಳಿಯೋಣೆ ಬಾರ್ಲ"

('ಅಂಬಿಕಾತನಯದತ್ತ' ಅವರ ಕ್ಷಮೆ ಬೇಡಿ.)



ತುಳಿಯೋಣೆ ಬಾರ್ಲ
ತುಳಿಯೋಣೆ ಬಾ.

ಯಾತ್ಕಾಗ,
ಕಾಲಾಗಾ,
ತುಳಿಯೋಣೆ ಚನ್ನಾಗ,
ಮಣ್ಣುಗಡ್ಡೆ ನುಣ್ಣಾಗ! ತುಳಿ....

ನೀರು ತಾರೆಲಿ ಚಿಕ್ಕಿ,
ತತ್ತಾರ್ಲೆ ಚುರ್ಚುರ್ಕ್ಕಿ,
ಬಿರ್ಬಿರ್ನೆ ನನ್ನಾಕಿ। ತುಳಿ....

ಮಿದ್ದಾಕಿ,
ತೀಡ್ದಾಕಿ,
ಹೆಂಟೈಲ್ಲ ಅರ್ದಾಕಿ,
ಹುಡಿಮಣ್ಗೆ ನೀರ್ದಾಕಿ। ತುಳಿ....

ಯಜ್ಮಾನ್ನ ಕೂಗಾಟ,
ಆ ಮೇಸ್ತ್ರಿ ಹಾರಾಟ,
ಸಾಕಾತು ಹೆಣಗಾಟ। ತುಳಿ....

ಮೆತ್ಕೊಂಡು
ಈ ಕೆಸ್ರು,
ಸಿಕ್ಕೊಂಡ್ರು ನಮ್ಮುಸ್ರು,
ತುಳಿತಾನೆ ಆಸರು। ತುಳಿ....

ಕೊಡ್ಯೆಲ್ಲ ಸೋತೋದ್ರು,
ಸೊಂಟೆಲ್ಲ ಮುರಿದೋದ್ರು,
ಜೀವಾನೆ ಹಾರೋದ್ರು। ತುಳಿ....

ತೀರದ
ಸಾಲದ,
ಹಾಳು ಸಂಸಾರದ,
ಮೀರಿದ ಭಾರ್ ಆದ। ತುಳಿ....

ಭಕ್ಕಾನ್ನ ನಮ್ಗ್ಯಾಕೆ?
ದುಡ್ಡಿನ ಆಸ್ಯಾಕೆ?
ಚಿಕ್ಕಾಸೆ ನಮಿಗ್ಸಾಕೆ। ತುಳಿ....

ಲೆಕ್ಕರ್ಲಿ,
ಪಕ್ಕರ್ಲಿ,
ಕೊಡದಿದ್ದು ಹೊರ್ಗ್ಹೋಗ್ಲಿ,
ಸೇಟನ ಚಿಂತಿರ್ಲಿ। ತುಳಿ....

ಕಣ್ಮೇಲೆ ಹೊರಳಿಸಿ,
ಎದೆ ಯುಸಿರ ನೊಣಗಿಸಿ,
ಬೆವರ್ಹನಿ ಯುರುಳಿಸಿ। ತುಳಿ....

ಚಿಕ್ಕುಡ್ಗಿ,
ಪುಟ್ಟುಡ್ಗಿ,
ನೀರ್ತಾತ್ರೆ ಬಿಂದ್ಗಿಂದ್ಗಿ,
ಜಲ್ಟಲ್ಲಿ, ದಿದ್ಗಿಗ್ಗಿ। ತುಳಿ....

ಹಾಳ್ಮೇಸ್ತ್ರಿ ಬೈತಿದ್ರು,
ಕಾಸ್ಕಿೀಲ ಬಿಚ್ಚಿದ್ರು,
ಈ ಕೆಲ್ಸ ಗಿಟ್ಟಿದ್ರು। ತುಳಿ....

—ಬಿ. ಚಂ.




ಬಟ್ಟ ತಲೆಯವನು ಬಟ್ಟ ತಲೆಯವನಿಗೆ "ಬಟ್ಟ ತಲೆ ಸಿದ್ಧೌಷಧ" ಮಾರಿದನಂತೆ.
ಹಿಂದೋಟದ ಸುಪ್ರಸಿದ್ಧರು ಹಿಂದುಗಳಿಗೆ ಬುದ್ಧಿ ಕಲಿಸಿದರಂತೆ.

# ನಾನು ಧಾಂಡಿಗನೇ?

ನನಗೆ ಈಗ ಇಪ್ಪತ್ತು ವರ್ಷ. ಆದರೂ ಕೇವಲ ನಾಲ್ಕು ವರ್ಷದ ಮಗುವಿನ ಹಾಗೆ ನನಗೆ ಆಟದಲ್ಲಿ ಪ್ರೀತಿ ಹೆಚ್ಚು; ಆಟ, ಅಂದರೆ ಸಣ್ಣ ಮಕ್ಕಳೊಂದಿಗೆ ಕಣ್ಣಾಮುಚ್ಚಾಲೆ ಕೋಲು ಕುದುರೆ ಗುಲ್ಟೋರಿಯಾ ಮುಂತಾದ ಆಟಗಳು! ದೊಡ್ಡವರೊಂದಿಗೂ ಸಮವಯಸ್ಕರೊಂದಿಗೂ ಓಡಾಡುವುದೆಂದರೆ ನನಗೆ ಬೇವಿನಕಾಯಿ ತಿಂದಹಾಗೆ. ಯಾಕೋ, ನನ್ನ ಮನಸ್ಸು ಮಗುತನದ ಮಟ್ಟಕ್ಕಿಂತ ಮೇಲಕ್ಕೇಳಲೇ ಇಲ್ಲ ಅಂತ ಕಾಣುತ್ತದೆ; ಮನಶ್ಶಾಸ್ತ್ರಜ್ಞರನ್ನು ವಿಚಾರಿಸಬೇಕು.

ನನ್ನ ತಂಗಿ ಸುಬ್ಬಿಗೆ ಒಂದು ಮಗು ಆಗಿದೆ; ಮಾಚ್ಚಿ ಅಂತಾರೆ ಅದನ್ನ. ಅದನ್ನ ಆಟ ಆಡಿಸುವುದಕ್ಕೆ ಅಂತ ಮೂರು ಹೊತ್ತೂ ಸುಬ್ಬಿ ನನಗೆ ಹೇಳಿ ಕಳುಹಿಸುತ್ತಲೇ ಇರುತ್ತಾಳೆ. ಕಾಲೇಜು ಓದುಗಾರಿಕೆಯ ಕಾಷ್ಟವ್ಯಸನಗಳನ್ನೆಲ್ಲ ಮರೆಯ ಬಹುದಲ್ಲಾ ಅಂತ ನಾನೂನೂ ಕರೆ ಬಂದಾಗಲೆಲ್ಲಾ ತಪ್ಪದೆ ಹೋಗುತ್ತಿದ್ದೇನೆ.

ಅಯ್ಯೋ ಅಯ್ಯೋ! ಈ ಮನುಷ್ಯ ಹೇಗೆ ಕಾಲೇಜು ತನಕ ಹತ್ತಿದ ಅಂತ ನಿಮಗೆ ಅನುಮಾನ ಬರಬಹುದು. ಆಶ್ಚರ್ಯ ಉಕ್ಕ ಬಹುದು. .... ನನಗೂ ಅದೇ ಆಶ್ಚರ್ಯ! ಇಷ್ಟೆಲ್ಲಾ ಪರೀಕ್ಷೆಗಳೂ ಪ್ರಶ್ನೆಗಳೂ ಶೇಕಡಾಗಳೂ ಬೋರ್ಡುಗಳೂ ಇದ್ದರೂ ಕೂಡ, ನನ್ನಂಥಾವನು ಬಿ. ಎ. ಕ್ಲಾಸಿಗೆ ಬರೋಣ ಅಂದರೇನು? ಇರಲಿ. ಆ ವಿಷಯ ಈಗ ಬೇಡ. ....

ಸುಬ್ಬಿ ಮನೆಗೆ ಹೋಗಿ ಕಾಫಿ ತೀರಿಸುವುದರೊಳಗೆ ಅವರಿಬ್ಬರೂ ಗಂಡ ಹೆಂಡತಿ ಸಿನಿಮಾಗೆ ಹೊರಟರು, ಮಾಚ್ಚಿ ಭಾರ ನನ್ನ ಭುಜದ ಮೇಲೆ ಬಿತ್ತು. ಸರಿ. ನಾನೂ ಮಾಚ್ಚೀನೂ ದೇವಸ್ಥಾನಕ್ಕೆ ಹೋದೆವು; ಅಡಿಗೆ ಮಾಡಿದೆವು; ಅರಸಿನದ ಪೊಟ್ಟಣ ಕಟ್ಟಿದೆವು; ಆರತಿ ಎತ್ತಿದೆವು; ರಸ್ಕೋಲಾಟವೂ ಆಯಿತು. ಅವರು ಬರಲೇ ಇಲ್ಲ. ಸಿನಿಮಾದಿಂದ ಬರುವಾಗ ಜವಳಿ ಅಂಗಡಿಗೆ ಬೇರೆ ನುಗ್ಗಿದ್ದರಂತೆ. ಕಮಾಕಚ್ಚಿ! "ಕಒಕಂದು ಕರಾಕಜ್ಯಕದಕಲ್ಲಿ ಕಒ ಕಬ್ಬ ಕರಾಕಜ ಕಇಕದ್ದ" ಅಂತ ಒಂದು ಕಥೆ ಹೇಳಿದೆ. ಅವಳೂ ಅದೇ ಭಾಷೆಯಲ್ಲಿ ನನಗೊಂದು ಕಕಕತೆ ಹೇಳಿದಳು. ಅಷ್ಟು ಹೊತ್ತಿಗೆ ಭಾವ ಬಂದು 'ಹೋಗಿಬಿಟ್ಟು ಬರುತ್ತೀಯಾ, ಗೋಪು?' ಅಂದ.

ಆದರೆ ಸುಬ್ಬಿ, ಎಷ್ಟಾದರೂ ಸಹೋದರಿ, ಅಷ್ಟಕ್ಕೇ ನನ್ನನ್ನು ಬಿಡಲಿಲ್ಲ. "ಗೋಪೂ! ಒಂದು ಶಿಶುವಿಹಾರ ಪ್ರಾರಂಭಿಸೋ! ನಮ್ಮ ಮನೆ ಮುಂದೆ ಇಷ್ಟು

ಮರಳು ಹಾಕಿ ಒಂದು ಮೋಟಾರ್ ಟೈರ್ ಸಂಪಾದಿಸಿದರಾಯಿತಪ್ಪಾ!" ಅಂದಳು. ನಾನು ಸುಮ್ಮನಿದ್ದೆ. ಯೋಚನಾ ತರಂಗಗಳು ಒಂದರ ಹಿಂದೊಂದಾಗಿ ನನ್ನ ಎಳೆ ಮನಸ್ಸಲ್ಲಿ ಎದ್ದು ಕುಣಿದಾಡಿದವು, ಇತ್ಯಾದಿ, ನನಗೆ ಚೆನ್ನಾಗಿ ವಿವರಿಸುವುದಕ್ಕೆ ಬರುವುದಿಲ್ಲ. ಅಂತು, ಹಾಗಾಯಿತು. "ಗೊಪ್ರೂ" ಅಂತ ಅವಳು ಮತ್ತೆ ಮಾತೆತ್ತಿದಳು. ನಾನು ಬಾಗಿಲು ಸಂದಲ್ಲಿ ಚಪ್ಪಲಿ ಹುಡುಕಿದೆ. "ಓದು ತಲೆಗೆ ಹತ್ತೊದಿಲ್ಲ ಅಂತೀಯಾ! ನಾಲ್ಕು ಮಕ್ಕಳನ್ನ ಸೇರಿಸಿ ಆಟ ಆಡಿಸಿದರೆ ತಿಂಗಳಿಗೆರಡು ರೂಪಾಯಿ ಆದರೂ ಸಿಗುತ್ತೆ." ಅಂದಳು. ಕೊಡೆಯನ್ನು ಕೊಂಕುಳಿಗೇರಿಸಿದೆ.

ದಾರಿಯುದ್ದಕ್ಕೂ ಸುಬ್ಬಿಯ ಸೂಚನೆ ಕಿವಿಗಳೆರಡರಲ್ಲೂ "ಘುಂ" ಗುಟ್ಟುತ್ತಿತ್ತು. ಆದರೆ, ಶಿಶು ವಿಹಾರ ಅಂದರೆ ಒಬ್ಬನಿಂದ ನಡೆಸಲಸಾಧ್ಯ. ನನ್ನ ಹಾಗೆ ಮತ್ತೊಬ್ಬನನ್ನ ಹುಡುಕಿ ಪತ್ತೆ ಹಚ್ಚುವುದೆಂದರೆ ಆಗದಕೆಲಸ. ಮಾಗದ ಮೆದುಳು; ತಲೆನೋವು ಬಂತು. ಪ್ರತಿಭೆಗಾಗಿ ಕಾಯುತ್ತಾ ಮನೆ ಮುಂದಿನ ವೆರಾಂಡಾದಲ್ಲಿ ಮುಂದಳಿಗೆ ಹಾಸಿ ಮಲಗಿದೆ.

ಬಂತು. ಎದ್ದುಹೋಗಿ ಅಮ್ಮನನ್ನ ಪುಸಲಾಯಿಸಿ ಮೂರು ರೂಪಾಯಿ ಸಾಲ ಅಂತ ಇಸುಕೊಂಡು 'ನಮ್ಮೂರು' ಪತ್ರಿಕೆಯಲ್ಲಿ ಒಂದು ಜಾಹಿರಾತು ಹಾಕಿಸಿದೆ,

**ಮಕ್ಕಳೊಂದಿಗೆರೇ!**
**ಮರುಗಬೇಡಿ!**
**ಗೋಪು ಚಿಕ್ಕಪ್ಪ**

ನಿಮ್ಮ ಮನೆಗೇ ಬಂದು ಅಲ್ಲೇ ನಿಮ್ಮ ಮುಂದಿನ ಪೀಳಿಗೆಯನ್ನು ಕುಣಿಸಿ ನಲಿಸುವನು.

ಹಲ್ಲು ಕಿರಿದು ಜೊಲ್ಲು ಸುರಿಸಿ ಅದಲು ಬದಲು ತೊದಲು ನುಡಿದು ಆಟ ಆಡಿಸಿ ಊಟ ಮಾಡಿಸಿ ಓಡಿಸಿ ಕಾಟ ತಪ್ಪಿಸುವನು.

ಗಂಟೆಯೊಂದಕ್ಕೆ ರುಸುಂ ಒಂದು ಮಗುವಿಗೆ ನಾಲ್ಕಾಣೆ.

ಒಂದು ಡಜ಼ನ್ ಮಕ್ಕಳಿಗೆ ಎರಡೂವರೆ ರೂಪಾಯಿ.

ಆಟಿಗೆಗಳನ್ನು ಚಿಕ್ಕಪ್ಪನೇ ತರುವನು.

ವಿಳಾಸ:
ತಾಪತ್ರಯ,
ಮುಪ್ಪಿನ ಕೊಳದ ಬೀದಿ,
ಮೈಸೂರು.

ಮರು ದಿನವೇ ಕಾಗದ ಬಂತು. ಪರವಾಯಿಲ್ಲ, ಒಂದು ಪಾವಲಿಯಾದರೂ ಲಭಿಸುತ್ತದೆ ಅಂತ ಹಿಗ್ಗಿದೆ. ಹರಿದು ತೆಗಿದು ಓದುವಾಗ ಕೈ ನಡುಗಿತು. ರೋಮಾಂಚವಾಯಿತು: ಯಾರೋ ಅಪರಿಚಿತರು. ಆದರೇನು? ಸಂಸಾರಿಕರು, ಇನಾಮ್‌ದಾರರು, ಒಂದೇ ಒಂದು ಮಗು, ಗಂಡು, ಇನ್ನೂ ಪುಟ್ಟ ಕೂಸು ಅಂತಲೇ ನಾಮಧೇಯ, ನಾಲ್ಕು

ವರ್ಷ ಎಂಟು ತಿಂಗಳು, ಶ್ರವಣನಕ್ಷತ್ರ, ಮಕರರಾಶಿ, ಸಂಜೆ ಐದು ಗಂಟೆಯಿಂದ ಏಳರ ವರೆಗೆ.

ಸರಿ ಅಡಿಗೆಮನೆ ಮೂಲೆಯಲ್ಲಿ ಅಮ್ಮ ಕೂಡಿಹಾಕಿದ್ದ ಹನ್ನೊಂದು ಖಾಲಿ ಬೆಂಕಿ ಪೆಟ್ಟಿಗೆಗಳೊಂದಿಗೆ ಆವರ ಮನೆಗೆ ಹೋಗಿ ಪುಟ್ಟಕೂಸಿನ ಪಕ್ಕದಲ್ಲೇ ಕುಳಿತೆ. ಅವುಗಳಿಂದ ಗೋಡೆ ಎತ್ತರಿಸಿ ಮನೆ ಕಟ್ಟಿದೆ. ಹುಡುಗನ ಮನಸ್ಸು ಬಹು ಚಂಚಲ. ಬೆನ್ನಮೇಲೆ ಕೂರಿಸಿ ಅವರ 'ಹಾಲ' ನ್ನು ಮೂರು ಸಾರಿ ಬಲಬಂದೆ. ದೊಡ್ಡ ಹಾಲು: ೨೨ ಅಡಿ ಉದ್ದ ೧೭ ಅಡಿ ಅಗಲ! ಹುಡುಗನಿಗೆ ಹವಾ ಬದಲಾಯಿಸಬೇಕೆಂದು ತೋರಿತು. ತೋಟಕ್ಕೆ ಕರೆದುಕೊಂಡು ಹೋದೆ. ತಲೆಯಮೇಲೆ ಕೂತ. ನಾನು "ರಸಬೂರಿ ಮಾವಿನ ಹಣ್ಣು" ಅಂತ ಕೂಗುತ್ತಾ ಹದಿನೈದು ನಿಮಿಷ ಆವನನ್ನೂ ಹೊತ್ತುಕೊಂಡು ತಿರುಗಾಡಿದೆ. ಹುಡುಗನ ವಯಸ್ಸಿನ ವಿಷಯದಲ್ಲಿ ಮನೆ ಯಜಮಾನ ಸುಳ್ಳು ಹೇಳಿರಬೇಕೆಂದು ತೋರಿತು. ವೃಷಭರಾಶಿಯೋ ಎಂಬ ಅನುಮಾನ ತುಂಬ. "ಬಾದಾಮಿ ಮಾವಿನಹಣ್ಣು" ಅಂತ ಕೂಗಿಕೊಳ್ಳಬೇಕು ಎಂದು ಆವನ ಬಲವಂತ ಬೇರೆ. ರಸಬೂರಿ ಅಂದರೆ ಕಡಿಮೆಯಂತೆ!

ಸದ್ಯಃ—ಏಳು ಹೊಡೆಯಿತು. ಪುಟ್ಟಕೂಸನ್ನಿಳಿಸಿದೆ. ಇನ್ನುಮೇಲೆ ಈ ಹೊಸಲು ದಾಟುವುದಿಲ್ಲ ಅಂತ ಎಂಟಾಣೆಗೆ ಕೈನೀಡಿದೆ, ಸಬೂಬು ಹೇಳದೆ ಕೊಟ್ಟರು. ಈ ಬೋಣಿ ಬರಬರುತ್ತಾ ಭಂಗಾರವಾಗಲಿ ಅನ್ನುತ್ತಾ ಕಿಸೆಯೊಳಗೆ ಇಡುವಮೊದಲು ಹಾಳು ಹುಡುಗ ಹಾರಿಬಂದು ಗಬಕ್ಕನೆ ಕಸಿದುಕೊಂಡು ಬಿಟ್ಟ. ಯಾಕೋ ಅಂತ ನಾನು ಹೆದರಿಸುವುದಕ್ಕೆ ಹೋದರೆ, ಅವನು ಅಂದ ಮಾತು ಕೇಳಿ ಸ್ವಲ್ಪ: 'ನಿನ್ನಂಥಾ ಧಾಂಡಿಗನ ಜೊತೇಲಿ ಇಷ್ಟು ಹೊತ್ತೂ ಆಟ ಆಡಿದ್ದಕ್ಕೆ ನನಗೆ ನೀನು ಒಂದು ರೂಪಾಯಿ ಕೊಡಬೇಕು.'

ಕೊಡೆಯನ್ನು ಕೊಂಕುಳಿಗೇರಿಸಿದೆ. ಚಪ್ಪಲಿಯನ್ನೂ ಅಲ್ಲೇ ಬಿಟ್ಟು ಬಂದೆ; ಹುಡುಕುವುದಕ್ಕೆ ತಾಳ್ಮೆ ಇರಲಿಲ್ಲ.

**ನಾ. ಕ.**

---

ಶ್ರೀ ಮಳಯಾಳದವರ ಕವಿಗಳನ್ನು ನೋಡಿದರೆ ನವೀನ ಲೋಲಕ್ಕಿಗಳ ಹಾವಳಿ ತಿಳಿಯಬರುತ್ತದೆ—

* * * *

**ಕವಿಯು ಸಾಯುವತನಕ ಆತನ ಹೇರ್ಮೆಯನ್ನು ಲೋಕವು ಅರಿಯುವುದಿಲ್ಲ ಎಂದು ಲೇಖಕರೊಬ್ಬರ ಆಲಾಪನೆ. ಲೋಕಕ್ಕೆ ಅರಿವಾಗುವಾಗ ಕವಿಯು ಸುರಕ್ಷಿತ**

# ಗಂಡ ಹೆಂಡಿರು

●

'ಇವತ್ತೇನು? ಎಲ್ಲಿಗೂ ಹೊರಡಲಿಲ್ಲವೆ? ಸಾಯಂಕಾಲ....'

'ಬೇಜಾರು, ಕಣೆ! ಮನೆಯಲ್ಲೇ ಇದ್ದುಬಿಡುತ್ತೇನೆ....'

'ಆಫೀಸಿನಿಂದ ಬಂದು ಕಾಫೀ ಕುಡಿಯುವುದೇ ತಡ ಬಾಗಿಲು ಬಡಿಯುತ್ತಿದ್ದನಲ್ಲಾ ಆ ಗೃಧ್ರ, ಎಲ್ಲಿ ಇವತ್ತು?'

'ಯಾರು? ಗೋವಿಂದರಾಯನೇ? ಅವನಿಗೆ ಮಲೇರಿಯಾ. ಮಲಗಿದ್ದಾನೆ....'

'ಈ ಊರಿಗೆ ಬಂದಮೇಲೆ ನಾವಿಬ್ಬರೂ ಇಷ್ಟುಹೊತ್ತಿನಲ್ಲಿ ಇವತ್ತು ಮನೆಯಲ್ಲಿದೇವೆ; ಇದುವರೆಗೂ, ನೀವೆಲ್ಲೋ ನಾನೆಲ್ಲೋ?'

'ಹೌದು, ಕಣೆ! ಆರು ಗಂಟೆ ಈಗ.... ಸಿನಿಮಾಗೆ ಹೋಗೋಣವೇ....'

'ನಾನು ನೋಡಿದ್ದೇ ಚಿತ್ರ....'ಮಣ್ಣಿನ ಗಾಡಿ' ಅದನ್ನೇನು ಮತ್ತೆ ನೋಡುವುದು?'

'ಹಾಗಾದರೆ ಪಕ್ಕದ ಮನೆಗೆ ಹೋಗೋಣವೇ ಇಬ್ಬರೂವೆ?'

'ಅವರು ಗಂಡ ಹೆಂಡತಿ ಈಗತಾನೆ ಈ ರಸ್ತೆಯಲ್ಲೇ ಹೊರಟರು'

'ಇನ್ನೇನು ಮಾಡುವುದು? ಆ ಗ್ರಾಮಫೋನ್ ತಿರುಗಿಸಿ ಒಂದು ಪ್ಲೇಟು ಹಾಕು; ಸುಖವಾಗಿ ಕೇಳೋಣ, ಆ ಈಸಿಚೆಯರನ್ನ ಹೀಗೆ ಎಳೆದುಕೊ!'

'ಬಿಡಿ ಅಂದ್ರೆ! ಮದುವೆ ಟೈಂನಲ್ಲಿ ನಮ್ಮಪ್ಪ ಕೊಟ್ಟಿದ್ದಲ್ಲದೆ ಒಂದು ಹೊಸ ಪ್ಲೇಟೂ ಈಚೆಗೆ ನೀವು ತೆಗೆದುಕೊಂಡಿಲ್ಲ. ಕೇಳಿ ಕೇಳಿ ಕಿವಿಯೆಲ್ಲಾ ತೂತು ಬಿದ್ದಿದೆ, ಹಾಳು ಪ್ಲೇಟು.'

'ಮತ್ತೆ ಹೇಗೆ ಕಾಲ ಕಳೆಯುವುದು?'

'ಸುಖವಾಗಿ ಇಬ್ಬರೂ ಕೂತುಕೊಂಡು ಹರಟೆ ಹೊಡೆಯೋಣ! ಹೀಗೆ ನಾವು ವಿರಾಮವಾಗಿ ಕುಳಿತು ಮಾತನಾಡಿ ಮೂರು ವರ್ಷವಾಯಿತು. ಹಿಂದೆ ನೀವು ನಮ್ಮೂರಿಗೆ ಬರುತ್ತಿದ್ದರಲ್ಲಾ ಕಾಲೇಜಿಂದ....ಆಗ.'

'ಸೊಗಸಾದ ಯೋಚನೆ! ಬಾ! ಕೂತುಕೋ ಮತ್ತೆ!........'

'ಏನಾದರೂ ಮಾತನಾಡಿ ನೀವೇನೆ!'

'ಯಾವ ವಿಷಯ?'

'ಯಾವುದಾದರೂ ಸರಿ'

'ಸೊಸೈಟಿಗೆ ಹೋಗಿದ್ದೆಯಾ ಬೆಳಿಗ್ಗೆ? ಚೀಟಿಬಟ್ಟೆ ತಂದೆಯಾ?'

'ಹೋಗಿದ್ದೆ! ತಂದೆ!'

'ನೀನೇನಾದರೂ ಕೇಳು ನನ್ನನ್ನು.'

'ಆಫೀಸಿನಲ್ಲಿ ಇವತ್ತು ದೊಡ್ಡ ಸಾಹೇಬರು ಬಂದಿದ್ದರೇ?'

'ಬಂದಿದ್ದರು.'

'ಈಗ ನೀವು ಕೇಳಿ ನನ್ನನ್ನ ಏನಾದರೂ'

'ಪೋಸ್ಟ್ ಮ್ಯಾನ್ ಬಂದಿದ್ದನೆ?'

'ಇಲ್ಲ'

'ಈಗ ನೀನು ಕೇಳಬೇಕಾದದ್ದು.... ಹರಟೆ ಅಂದರೆ ದೊಡ್ಡ ವಿಷಯ ಏನಾದರೂ ತೆಗೆದುಕೋಬೇಕು. ಚುಟಕ ಚುಟಕ ಕೇಳಬಾರದು.'

'ಗೊತ್ತು ಅಂದರೆ,—ಬೆಳಿಗ್ಗೆ ಬಸ್ಸು ಸಿಕ್ಕಿತೆ?'

'ಇಲ್ಲ'

'...........'

'...........'

'ಯಾಕೆ, ಸುಮ್ಮನಾಗಿ ಬಿಟ್ಟಿದೀರಿ?'

'ನೀನೇ ಏನಾದರೂ ಮಾತನಾಡು'.

'ಇನ್ನೇನಿದೆ ಮಾತಿಗೆ?........ನಿಮ್ಮ ಆಫೀಸಿನಲ್ಲಿ ನೀವು ಹೇಳುತ್ತಿದ್ದರಲ್ಲಾ ಕುಲಕಂಟಕ ಅಂತ........'

'ಹುಂ....ಹೆಡ್‌ಕ್ಲಾರ್ಕು....'

'ಅವನಿಗೆ ವರ್ಗವಾಗೋದಿಲ್ಲವೆ?'

'ವರ್ಗವಾಗಬಹುದು'

'ಈಗ ನೀವೇನಾದರೂ ಕೇಳಿ ನನ್ನನ್ನ'

'ಯಾವ ಸಮಾಚಾರವೂ ಇಲ್ಲವಲ್ಲೇ ಹರಟೆಗೆ....ಎಲ್ಲಾನೂ ಮುಗಿದು ಹೋಯಿತಲ್ಲೇ....'

'ಚೆನ್ನಾಯಿತು'

'ಈಗ ಹಾಲು ಕೊಡುತ್ತಾ ಇದಾಳಲ್ಲ' ಅವಳನ್ನ ಕಳುಹಿಸಿ ಬಿಡಬೇಕು ಅಂತ ಹೇಳುತ್ತಿದೆಯಲ್ಲಾ:....... ಕಳುಹಿಸಾಯಿತೆ?....'

'ಇಲ್ಲ ಇನ್ನೂ'

'?'

'?'

'!'

'ಅಕೋ ನಿಮ್ಮ ಮಲೇರಿಯಾ ಸ್ನೇಹಿತರು ಬಂದರು........'

'ಸದ್ಯಃ ಬದುಕಿದೆ....ನಾನು ಹೋಗಿ ಬಿಟ್ಟು ಬರುತ್ತೇನೆ'

'ಅಕೋ! ಲಕ್ಷ್ಮಮ್ಮನವರೂ ವಾಕಿಂಗ್ ಮುಗಿಸಿ ಹಿಂತಿರುಗಿ ಬರುತ್ತಿದಾರೆ........ ನಾನೂ ಲಕ್ಷ್ಮಮ್ಮನ ಮನೆಗೆ ಹೋಗುತ್ತೇನೆ; ನೀವು ಬರುವತನಕ........'

ಅಂತೂ ಎಷ್ಟೋ ತಿಂಗಳಾದ ಮೇಲೆ ಈಹೊತ್ತು ಸುಖವಾಗಿ ಹರಟೆ ಹೊಡೆದೆವು ಅಲ್ಲವೆ, ಸರಸು'

'ಹೌದು ಅಂದ್ರೆ.'

—ನಾ. ಕೆ.

---

ಮಲ್ಲೂರಿನಲ್ಲಿ ಒಬ್ಬ ಮುಲ್ಲನಿದ್ದನು
ಹುಲ್ಲಿನಂತೆ ಗಡ್ಡವನ್ನು ಹಬ್ಬಿಸಿದ್ದನು
ಮೂರು ಕೋಳಿ ಒಂದು ಕಾಗಿ
ಆರು ಗುಬ್ಬಿ ಎರಡು ಗೂಗಿ
ಗಡ್ಡದಲ್ಲಿ ಗೂಡುಕಟ್ಟಿ ವಾಸವಾದವು

—'ಆರ್ದ್ರ

# ಹೋಲ್ಡಾನ್

"ಅಣ್ಣಾ...." ಕೇಳಿಬಂತು ಕೂಗು ಕುಮಾರ ಕಂಠೀರವನದು. ಸುಡು ಸುಡು ಕಾಫಿ ಕೈಯಲ್ಲಿ; ಬೆಳ್ಳಿಬಟ್ಟಲಿನಲ್ಲಿ. ಆಗತಾನೆ ತುಟಿಗೆ ಇಟ್ಟು ಇನ್ನೇನು ಕುಡಿಯಬೇಕು ಅನ್ನುವ ಸುಸನ್ನಿವೇಶ. ಆಗ "ಅಣ್ಣಾ.... ವೆಂಕಟ್ರಾಯರು ಬಂದಿದಾರೇ ಅಣ್ಣಾ...." ಅಂದ ಕಂಠಿ. ಕಾಫೀಬಟ್ಲು ಕೆಳಗಿಟ್ಟೆ. "ಲೇ.... ವೆಂಕಟ್ರಾಯಾ ಬಂದಿದಾನೆ.... ಅಪರೂಪದ ಅತಿಥಿ.... ಡಿಕಾಕ್ಷನ್ನಿಗೆ ಒಂದಿಷ್ಟು ಬಿಸಿನೀರು ಬೆರಸಿ, ಉದ್ಧರಣೆ ಹಾಲು ಹಾಕಿ ಬೇಗ ಕಾಫೀ ಮಾಡೆ" ಅಂದೆ.

ವೆಂಕಟರಾಯನನ್ನು ಕಂಡು ಬಹಳ ದಿನಗಳಾಗಿದ್ದುವು. ಹಾಸ್ಟಲಿನಲ್ಲಿ ಒಟ್ಟಿಗೇ ಅಹೋರಾತ್ರಿ ಹರಟೆಹೊಡೆಯುತ್ತಾ ಓದುತ್ತಿದ್ದ ಗೆಳೆಯರು ನಾವು. ಇಬ್ಬರಿಗೂ ಒಟ್ಟಿಗೇ ಅದೃಷ್ಟವಶಾತ್ ಫೇಲಾಯಿತು. ಇರಲಿ. ಈಚೆಗೆ ಹಾರ್ಮೋನಿಯಂ ಹೊನ್ನಮ್ಮನ ಕೈಹಿಡಿದು ಸಂಸಾರ ಸುಖಾನ ಸವಿಯುತ್ತಿದಾನೆ. ಪಾಪ ಸಾಧು ಪ್ರಾಣಿ. ಹಸುವಿಗಿಂತ ಒಂದು ಕೈ ಮೇಲೆ ಅಂತಲೇ ಹೇಳ ಬಹುದು. ಆದರೂ ಒಳ್ಳೆಯ ಮನುಷ್ಯ. ಮೊನ್ನೆ ಅವನಿಗೆ ಕೆಲಸವಾಯಿತು ಅಂತ ಕೇಳಿದ್ದೆ....ಬಾತ್ಮೀದಾರನಾಗಿ. "ಆ ವಿಷಯವನ್ನು ಮುಖತಃ ಹೇಳಬೇಕೆಂದು ಬಂದಿದಾನೆ ಪಾಪ!.... ಕಾಫೀ ತಿಂಡಿ ಕೇಳಬೇಕು...." ಎಂದು ಸಂತೋಷದಿಂದ ಮುನ್ನಡೆದೆ. "ಇಲ್ಲಾಂದ್ರೆ.... ಕೆಲಸ ಆಯ್ತಲ್ಲಾ ಮೊನ್ನೆ ಅದಕ್ಕೋಸ್ಕರ ಒಂದು ಔತಣ ಏರ್ಪಡಿಸುತ್ತಾರಂತೆ ಈ ಭಾನುವಾರ.... ಕರೆಯುವುದಕ್ಕೆ ಬಂದಿರಬೇಕು" ಅಂತ ಉಸಿರಿದಲು ನನ್ನ ಭಾರ್ಯೆ. "ಕಾಫೀಗೆ ಒಂದು ಪಂಚಪಾತ್ರೆ ಹಾಲು ಹಾಕು...." ಎಂದು ಹೇಳಿ ಬಾಗಿಲಿಗೆ ಬಿಜಯಂಗಯ್ದೆ. "ಓ ಹೋ ಹೋ !! .... ಏನೋ.... ಬಾತ್ಮೀದಾರ್ ವೆಂಕಟ್ರಾವ್.... ದೊಡ್ಡಮನುಷ್ಯನಾಗಿಬಿಟ್ಟೆ.... ಇನ್ನೇನು ಪೇಪರಿನಲ್ಲೆಲ್ಲಾ ನಿನ್ನ ಹಾವಳಿಯೇ....? " ಅಂತ ಸ್ವಾಗತಿಸಿದೆ. "ಮೊನ್ನೆ ಆಕಡೆ ಬಂದಿದ್ದಾಗ ನನ್ನ ಕುಟೀರಕ್ಕೆ ಕಾಲಿಟ್ಟಿದ್ದರೆ ಚಪ್ಪಲಿ ಸವೆದುಹೋಗ್ತಿತ್ತೋ?...." ಎಂದು ಅವನೂ ಪ್ರಾರಂಭಿಸಿದ. "ಇರಲಿ ಬಾ.... ಕೂತ್ಕೋ, ಲೇ........ ಸ್ವಲ್ಪ ಕಾಫೀ ತೆಗೆದುಕೊಳ್ಳಯ್ಯ...."

"ಆಗಲಿ ಅದಕ್ಕೇನು........ ಸ್ವಲ್ಪ ಸ್ವಲ್ಪ.... ಅಯ್ಯೋ ಅಯ್ಯೋ.... ಸಾಕು" —ಓ: ಹೋಲ್ಡಾನ್.... ಹೋಲ್ಡಾನ್ ಬಸ್ ಬಂತು ಬಸ್ಸು.... ಹೋಗಿ ಬರ್ತೀನಿ ನಾಣಿ.... ಇಲ್ಲೇ ಶಾಸ್ತ್ರಿಗಳ ಮನೆಗೆ ಬಂದಿದ್ದೆ. ಬಸ್ಸಿಗೆ ಕಾಯ್ತಾ ನಿಂತಿದ್ದೆ.... ಬಿಸಿಲು ವಿಪರೀತ ನಿಮ್ಮ ಮನೇಗೆ ಬಂದೆ— ಅಷ್ಟೆ.... ಹೋಗಿಬಿಟ್ಟು ಬರ್ತೀನೆ

ನಾಣಿ. "ಹೋಲ್ಡಾರ್," ಅನ್ನುತ್ತಾ ಇದ್ದಕ್ಕಿದ್ದಹಾಗೇಯೇ ಓಡಿದ. ಎಂಜಲು ಮಾಡಿದ್ದ ಕಾಫಿಯನ್ನು ಪೂರ್ತಿ ಕುಡಿಯದೆ ಹಾಳಾದವನು ಹೊರಟೇ ಹೋದ.

ಸುಸ್ತಾದೆ; ಆ ಕಾಫೀನ ಕುಡಿದು ಚೇತರಿಸಿಕೊಂಡೆ. ಆದರೆ ಈ ಅನುಭವ ನನಗೇನು ಹೊಸದಲ್ಲ. ಅನೇಕಸಲ ಇಂತಹ ಸನ್ನಿವೇಶಗಳು ಬಂದಿವೆ. ಇದೇ ರೀತಿ ಹಿಂದೆ ನೂರಾರುಜನ "ಹೋಲ್ಡಾನ್...." ಅಂತ ನನ್ನ ಕಣ್ಣೆದುರಿಗೇ ಓಡಿದ್ದಾರೆ. ನಿಜ.... ಅದು ವೆಂಕಟ್ರಾಯನ ತಪ್ಪಲ್ಲ. ನನ್ನ ಮನೆ ತಪ್ಪು. ಹೀಗೆ ತೈಲಶಕಟ ಮನೆ ಮುಂದೆ ಸದಾ ಓಡಾಡುತ್ತೆ ಅಂತ ಗೊತ್ತಿದ್ದರೆ, ನನ್ನ ತೀರ್ಥರೂಪುಗಳು ಸಾಲಮಾಡಿ ಇಲ್ಲಿ ಮನೆ ಕಟ್ಟುತ್ತಲೇ ಇರಲಿಲ್ಲ. ನಮ್ಮ ಮನೆ ಇರುವುದು "ಬಸ್ ಸ್ಟಾಪ್" ಎದುರಿಗೆ; ಅಲ್ಲ, ನಮ್ಮ ಮನೆ ಮುಂದೆ "ಬಸ್ ಸ್ಟಾಪ್" ಹಾಕಿದಾರೆ. "ಈಕಡೆ ಹೋಗೋ ಬಸ್ಸುಗಳೆಲ್ಲಾ ನಮ್ಮ ಮನೆ ಮುಂದೆ ಬಾಯಿಮುಚ್ಕೊಂಡು ನಿಲ್ಲಲೇ ಬೇಕು" ಅಂತ ಹೊಸದರಲ್ಲಿ ಕಂಠಿ ಪಕ್ಕದಮನೆ ಕಿಟ್ಟಿ ಹತ್ತಿರ ಜಂಬ ಕೊಚ್ಚಿಕೊಳ್ಳು ತ್ತಿದ್ದ. ಈಗ ಅವನೂಕೂಡ "ಬಸ್ ಕಂಪನಿಗೆ ಬರೆದು ಬಸ್ ಸ್ಟಾಪ್ ತೆಗೆಯೋಕೆ ಹೇಳಣ್ಣಾ" ಎಂದು ಪಲ್ಲವಿ ಪ್ರಾರಂಭಿಸಿದಾನೆ. ಈಚೆಗೆ ಸ್ವರಾನೇ ಹಾಕ್ತಾ ಇದಾನೆ.

ಬಸ್ ಸ್ಟಾಪಿನ ಹತ್ತಿರ, ಬಸ್ಸಿಗಾಗಿ ಕಾಯುವವರೆಲ್ಲ, ನಮ್ಮ ಮನೆಗೆ ನುಗ್ಗು ತ್ತಾರೆ. ಮನೆಗೆ ಬರುವವರೆಲ್ಲಾ ಇಂತಹ ಬಸ್ಸಿಗರೇ! ತಂದೆಯವರು ಮನೆಮುಂದೆ ನೆಟ್ಟ ತೆಂಗಿನ ಗಿಡಗಳು ತಂಪಾಗಿ ನೆರಳನ್ನು ಕೊಡುತ್ತಿವೆ; ವರಾಂಡಬೇರೆ ಇದೆ. ಹತ್ತಿರವೇ ನಲ್ಲಿ. ಇನ್ನೇನಾಗಬೇಕು ಪ್ರಯಾಣಿಕರಿಗೆ? "ಪಾಪ!.... ಬಿಸಿಲು ಒಂದು ಸ್ವಲ್ಪಹೊತ್ತು ಕೂತುಕೊಂಡು ಹೋಗ್ತಾರೆ" ಅಂತ ಮೊದ ಮೊದಲು ನಾನೂ ಸುಮ್ಮನಿದ್ದೆ. ನಾನೇ ಕರೆದು ಕುಳ್ಳಿರಿಸುತ್ತಿದ್ದೆ; ನಯವಾಗಿ ಮಾತನಾಡು ತ್ತಿದ್ದೆ!

ಆದರೆ ಕಾಲಕ್ರಮೇಣ ನನಗೂ ಬೇಜಾರಾಯಿತು. ಬರುವವರೆಲ್ಲಾ "ಏನಯ್ಯಾ ನಾಣಿ.... ಬಸ್ ಇನ್ನೂ ಬಂದಿಲ್ಲವೆ? ಮೇಲೆ ಹೋಗಿದೆಯೇನಯ್ಯಾ ಬಸ್ಸು.... ಇನ್ನೂ ಬಹಳ ಹೊತ್ತಾಗುತ್ತೋ? .... ಏನು ನಾರಾಯಣ ರಾಯರೇ ಎಷ್ಟು ಹೊತ್ತು ಅಂತ ಕಾಯೋದು?" ಅಂತ ನನ್ನನ್ನೇ ಕೇಳಲು ಪ್ರಾರಂಭ. "ಈಚೆಗೆ ಯಾಕೆ ನಾರಾಯಣರಾಯರೇ ಯಾವ ಬಸ್ಸೂ ಸರಿಯಾಗಿ ಬರುವುದೇ ಇಲ್ಲ ವಲ್ಲಾ....? .... ಕಂಡಕ್ಟರುಗಳ ಪ್ರತಿಷ್ಠೆ ಜಾಸ್ತಿಯಾಗಿಬಿಟ್ಟಿದೆ ನಾರಾಯಣರಾ ಯರೇ...." ಅಂತ ನನ್ನೊಂದಿಗೆ ಚರ್ಚಿಸುವುದಕ್ಕೂ ಆರಂಭಿಸಿದರು. ಎಷ್ಟೋ ಜನರ ಅಪರೂಪದರ್ಶನವಾದಾಗ ಸಂತೋಷದಿಂದ ಬರಮಾಡಿಕೊಳ್ಳಲು ಗೇಟ್ ಬಾಗಿಲ ವರೆಗೂ ನಾನು ಹೋದರೆ "ಏನು ನಾಣಿ.... ಬಸ್‌ಗೆ ಕಾಯ್ತಾ ನಿಂತಿದ್ದೆ.... ಮನೇ ಲೆಲ್ಲಾ ಸೌಖ್ಯವೋ.... ನೀನು ಮನೇಲಿಲ್ಲಾ ಅಂತ ಇದ್ದೆ.... ಓ ಬಸ್ ಬಂತು....

ನಿನಗೇನಯ್ಯಾ.... ಕಾಯಬೇಕಾದ್ದೇ ಇಲ್ಲಾ ಮನೆ ಮುಂದೇನೇ ಬಸ್ ನಿಲ್ಲುತ್ತದೆ....' " ಎಂದು ನನ್ನ ಹುಮ್ಮಸ್ಸನ್ನೆಲ್ಲಾ ಕುಡಿಯಲ್ಲೇ ಕತ್ತರಿಸಿ ಮುಖಕ್ಕೆ ಮಂಗಳಾರತಿ ಎತ್ತಿದ್ದಾರೆ.

ಕೆಲವರು ಏನ್ಮಾಡ್ತಾರೆ ಅಂತೀರೋ? ತಮ್ಮ ಗೆಳೆಯರನ್ನು ಕರೆದುಕೊಂಡು ಬರ್ತಾರೆ ಜೊತೇಗೆ. "ಇವರು ಯಾರು ಗೊತ್ತಿಲ್ಲವೆ ನಾಣಿ.... ನೀನು ಹೊಸೂರಿನಲ್ಲಿದ್ದಾಗ.... ನಿಮ್ಮ ಎದುರು ಬೀದೀ ಕಡೆ ಮನೇಲಿ.... ರಾಮರಾಯರು ಅಂತ ಲಾಯರು ಇರಲಿಲ್ವೇ? .... ಅವರ ಭಾವಮೈದ.... ಇಲ್ಲೇ ಸ್ಕೂಲ್ ಮೇಷ್ಟ್ರು...."




ಎಂದು ಪರಿಚಯಮಾಡಿಕೊಟ್ಟು, ಅವರಕಡೆ ತಿರುಗಿ "ನೀವೇನೂ ಸಂಕೋಚ ಪಟ್ಕೋಬೇಡಿ.... ನಾಣಿ ನನ್ನ ಸ್ನೇಹಿತ ಒಳ್ಳೆಯವನ. ಬಸ್ಸಿಗೆ ಇನ್ನು ಮೇಲೆ

ಬಿಸಿಲಿನಲ್ಲಿ ಕಾಯಬೇಡಿ.... ಬಸ್ ಪ್ರಯಾಣಿಕರಿಗೆಲ್ಲಾ ನಾಣಿ ಮನೆ ಸದಾ ತೆರೆದೇ ಇರುತ್ತೆ" ಎಂದು ಮುಖಸ್ತುತಿ ಬೇರೆ. ಹೀಗೆ ನನ್ನ ಸ್ನೇಹಿತರು, ಸ್ನೇಹಿತರ ಸ್ನೇಹಿತರು, ಚಿರಪರಿಚಿತರು, ಪರಿಚಿತರು, ಅಪರಿಚಿತರು .... ಎಲ್ಲರೂ, ನನ್ನದೂ ಒಂದು ಸಂಸಾರಸ್ಥನ ಮನೆ ಎನ್ನುವುದನ್ನು ಮರೆತು, ಬಸ್ ಪ್ರಯಾಣಿಕರ ನಿಲ್ದಾಣ ಅಂತ ತಿಳಿದಿದ್ದರು.

ನನಗೂ ತಡೆಯಲಾರದೆ ಹೋಯಿತು. ಒಂದು ಜಾತಿನಾಯಿ ಕೊಂಡು ಕೊಂಡು ಬಂದೆ.... ಚೆನ್ನಾಗಿಯೇ ಬೊಗಳುತ್ತಿತ್ತು "ಟೈಗರ್...." ಅಂತ ಹೆಸರೂ ಇಟ್ಟೆ, ಮೊದಮೊದಲು ಬೊಗಳಿ ಹೆದರಿಸುತ್ತಿದ್ದ ನಾಯಿಯೂ ಕೂಡ ಈಗ ಸುಸ್ತಿನಿಂದ ಯಾರು ಬಂದರೂ ಬೊಗಳುವುದೇ ಇಲ್ಲ. ನಾನು ಮನೆಗೆ ಬಂದಾಗ, ವಿಶ್ವಾಸದಿಂದ ಬೊಗಳುತ್ತೆ ಅಷ್ಟೆ.

"ನಾರಾಯಣರಾಯರಿದಾರೇನಯ್ಯ...." ಅಂತ ಕೂಗುಹಾಕುತ್ತಾ ಗೇಟ್ ಬಾಗಿಲು ತೆಕ್ಕೊಂಡು ಒಳಕ್ಕೆ ಬರುತ್ತಾರೆ ನನ್ನ ಸ್ನೇಹಿತರು. ಒಳಕ್ಕೆ ಕರೆದು ಕೂರಿಸಿ ಮಾತನಾಡುತ್ತಾ ಇರುವಾಗ ಇದ್ದಕ್ಕಿದ್ದ ಹಾಗೇ ಎದ್ದು ಬಾಗಿಲು ತೆಗೆದು. ಕೊಂಡು "ಹೋಲ್ಡಾನ್" ಅಂತ ಅರಚುತ್ತಾ ಓಡುವ ನೋಟ ಬಹಳ ಚೆನ್ನಾಗಿರುತ್ತದೆ. ತಮ್ಮ ಬರವನ್ನು ಸೂಚಿಸಲು ಮೇಲೆತ್ತಿ ಹಿಡಿದಿರುವ ಛತ್ರಿ, ಅಥವಾ ವಾಕಿಂಗ್ ಸ್ಟಿಕ್ಕು, .... ಅಬ್ಬ! ಅದೆಷ್ಟು ಬೇಗ ಅವರ ಕಿವಿ ನೆಟ್ಟಗಾಗುತ್ತೆ ಅಂತ! ದೂರದಲ್ಲೆಲ್ಲಾದರೂ ಹಾರನ್ ಶಬ್ದ ಕೇಳಿದರೆ ಸರಿ—ಎದ್ದು ಹೋಲ್ಡಾನ್ ಅನ್ನುತ್ತಾ ಓಟ! ಅನೇಕಸಲ ಬೇಸ್ತು ಬೀಳುತ್ತಾರೆ. "ಬಸ್ಸಲ್ಲಾ ಕಣಯ್ಯಾ! ಯಾವುದೋ ಹಾಳು ಮೋಟರು.... ಹಾರನ್ ಶಬ್ದ ಕೇಳಿ ಬಸ್ಸು ಅಂತ ಇದ್ದೆ" ಎಂದು ನಿಟ್ಟುಸಿರು ಬಿಡುತ್ತಾ ಮತ್ತೆ ಕುರ್ಚಿಯ ಮೇಲೆ ಕುಳಿತು ಕೊಳ್ಳುತ್ತಾರೆ. ಕೆಲವು ಬುದ್ಧಿವಂತರು ನನ್ನ ಮಗ ಕಂಠಿಯನ್ನು ಕರೆದು "ಲೋ ಮಗು.... ಬಸ್ ಬಂದ ತಕ್ಷಣ ಓಡಿ ಬಂದು ಹೇಳ್ತೀಯಾ ನನಗೆ.... ಜಾಣ.... ಬುದ್ಧಿವಂತ ಹುಡುಗ ಅಲ್ಲವೇ ನಾಣಿ? ಚಿಕ್ಕಂದಿನಲ್ಲಿ ನೀನೂ ಹೀಗೇ ಇದ್ದೆ...." ಎಂದು ನನ್ನ ಕಡೆಗೆ ತಿರುಗಿ ನೋಡುತ್ತಾರೆ. ನಿಜ. ಅವನು ಬುದ್ಧಿವಂತನೇ. ಈಚಿಗೆ ಅವನು, ಯಾರಾದರೂ ಮನೆಗೆ ಬಂದರೆ ಹಿತ್ತಲು ಗೋಡೆ ಹಾರಿ ಪರಾರಿಯಾಗಿಬಿಡುತ್ತಾನೆ! ಹಲವರು "ಹೋಲ್ಡಾನ್" ಎನ್ನುತ್ತಾ ಓಡುತ್ತಾ "ಲೋ ಕಂಠೀ.... ಓಡಿಹೋಗಿ ಬಸ್ ನಿಲ್ಲಿಸಪ್ಪಾ.... ಹೊಲ್ಡಾನ್ ಅನ್ನು.... ಬಂದ್ಬಿಟ್ಟೆ, .... ನನಗೆ ವಯಸ್ಸಾಯ್ತು ಓಡೋಕ್ಕಾಗೋಲ್ಲಾ...." ಎಂದು ನನ್ನ ಮುದ್ದು ಮಗನನ್ನು ಓಡಿಸುತ್ತಿದ್ದರು. ಕಪಟತನವರಿಯದ್ದ ಹಸು ಗೂಸಾಗಿದ್ದ ಕಂಠಿ ಆಗ.... ಹೇಳಿದ್ದಕ್ಕೆಲ್ಲಾ 'ಹೂಂ' ಗುಟ್ಟಿ

ತ್ತಿದ್ದ.... ತೆಗೆದ ಗೇಟ್ ಬಾಗಿಲನ್ನು ಮತ್ತೆ ಹಾಕಿಕೊಂಡು ಹೋಗಬೇಕೆನ್ನುವ ಬುದ್ಧಿ ಯಾರಿಗೂ ಇರುವುದಿಲ್ಲ. ಓಟದ ಅವಸರದಲ್ಲಿ ಯಾವುದೂ ನೆನಪಿಗೆ ಬರುವುದಿಲ್ಲ ಅವರಿಗೆ. ಸರಿ. ಕಂಠಿಯೋ ನಾನೋ ಅವರ ಹಿಂದೆಯೇ ಹೋಗಿ ಬಾಗಿಲು ಹಾಕಿಕೊಂಡು ಬರಬೇಕು. ಕೆಲವು ವೇಳೆ ಓಡಿಹೋದ ಬಸ್ಸಿಗರು, ಗಲಭೆಯಲ್ಲೇ ನುಗ್ಗಲು ಪ್ರಯತ್ನಿಸಿ ವಿಫಲರಾಗಿ ಮತ್ತೆ ನಮ್ಮ ಮನೆಗೇ ಹಿಂತಿರುಗುತ್ತಾರೆ. ಇನ್ನೊಂದು ಬಸ್ಸಿನಲ್ಲಿ ಸೀಟ್ ಒದಗಿಸಿಕೊಟ್ಟು ಕಳುಹಿಸುವವರೆಗೂ ನನಗೆ ಶಾಂತಿಯಿಲ್ಲ!

ಮೊನ್ನೆ ರಾತ್ರಿ ಹತ್ತುಗಂಟೆ ಸಮಯ. ಆಗತಾನೆ ನಿದ್ರೆ ಹತ್ತಿತ್ತು. ಯಾರೋ "ನಾಣೀ.... ನಾಣೀ...." ಅಂತ ಕೂಗುವುದಕ್ಕೆ ಪ್ರಾರಂಭಿಸಿದರು. ನನಗೆ ರೇಗಿ ಹೋಯಿತು. ಎದ್ದು ಬಾಗಿಲು ತೆಗೆದೆ.... ಗುಂಡ ನಿಂತಿದಾನೆ. ಹೆಗಲಲ್ಲಿ ಒಂದು ಭಾರಿ ಮೂಟೆ. ಥಾಂಡಿಗ ಮೂಟೆ ಕೆಳಗಿಳಿಸಿ. "ಲೋ.... ಈ ಅಕ್ಕಿ ಮೂಟೆ ನಿಮ್ಮ ಮನೇಲಿ ಇಟ್ಟಿರ್ತೀನಿ.... ಬೆಳಿಗ್ಗೆ ತೆಗೆದುಕೊಂಡು ಹೋಗ್ತೀನಿ ಬಸ್ಸಿನಲ್ಲಿ" 'ಸರಿ' ಅಂದದ್ದಾಯ್ತು, ಬೆಳಿಗ್ಗೆ ಎದ್ದು ನೋಡಿದರೆ ಮೂಟೆಯೇ ಪತ್ತೆಯಿಲ್ಲ. ನನಗೂ ಗುಂಡನಿಗೂ ಆದ ಜಗಳವನ್ನು ಇಲ್ಲಿ ಈಗ ವಿವರಿಸುವುದಿಲ್ಲ ನಾನು. ನಾನೇ ತಿಂದು ಬಿಟ್ಟೆ ಅಂತ ಊರಲ್ಲೆಲ್ಲಾ ಇನ್ನೂ ಹೇಳ್ತಾ ಇದಾನೆ!

"ನೀವೂ ಇದೀರಲ್ಲ ಗಂಡ್ಸು.... ಮೀಸೆ ಬೇರೆ ಮುಖಕ್ಕೆ.... ಈ ಹಾವಳಿ ತಪ್ಪಿಸುವುದಕ್ಕೆ ಕೈಯಲ್ಲಿ ಹರಿಯೋಲ್ವೇ" ಅಂತ ಆಕೆ ಕಟುವಾಗಿಯೇ ಮಾತನಾಡಿದಳು. ನನಗೂ ನಿಜ ಅನ್ನಿಸಿತು. ಮಾರ್ಕೆಟ್ಟಿಗೆ ಹೋಗಿ, ಹಾರ್ಮೋನಿಯಂ ಕೊಂಡು ಕೊಂಡು ಬಂದೆ.... ಹಗಲೆಲ್ಲಾ.... ಬಸ್ಸು ಓಡಾಡುತ್ತಿರುವಾಗಲೆಲ್ಲಾ ನನ್ನ ಮಗಳಿಗೆ ನಾನೇ ಕಲಿಸಲು ಪ್ರಾರಂಭಿಸಿದೆ.... ಉಹುಂ ಮಧ್ಯೆ ಮಧ್ಯೆ.... ನಾನೇ ಹೋಗಿ ಬಾಗಿಲು ತೆಗೆಯ ಬೇಕಾಯಿತು. ಹಾರ್ಮೋನಿಯಂಗೆ ಬಸ್ಸಿಗರು ಯಾರೂ ಹೆದರಲಿಲ್ಲ. ಪಕ್ಕದ ಮನೆಯವನು ಮಾತ್ರ 'ಒಂದು ಐದು ನೂರು ರೂಪಾಯಿ ಸಾಲ ತೆಗೆದುಕೊಂಡು ಮನೆ ಮುಂದೆ ಒಂದು ಬಸ್ ಸ್ಟ್ಯಾಂಡ್ ಕಟ್ಸಿ ಸ್ವಾಮಿ...." ಅಂತ ಹಾಸ್ಯ ಮಾಡಿದ.

"ಪರಮಾತ್ಮಾ! ಕರುಣಾಕಟಾಕ್ಷ!" ಎಂದೆ. ಮನೆ ಬಿಡೋಣವೆಂದರೆ ಸ್ವಂತ ಮನೆ. ಹಗಲೆಲ್ಲಾ ಬಸ್ ಗಲಾಟೆ. ರಾತ್ರಿಯೆಲ್ಲಾ ಕನಸುಗಳು; ನಿದ್ರೆಯಿಲ್ಲ.... "ಹೋಲ್ಡಾನ್" ಎಂಬ ಕೂಗು ಕಿವಿಯಲ್ಲಿ ಮೊಳಗುತ್ತಿದೆ. ಬಸ್ಸಿಗಾಗಿ ಅರಚುತ್ತಾ ಓಡುವವರ ಸದಾ ಕಣ್ಣ ಮುಂದೆ ತಾಂಡವವಾಡುತ್ತಿದೆ. ಈ ಕಷ್ಟದಿಂದ ನನ್ನನ್ನು ನೆರವಾಗಿಸುವುದೇನೆಂದರೆ ಒಂದೇ ಒಂದು ಮಾರು ಹಗ್ಗ!

ಎಂ. ವಿ ಎಸ್.

# ಮಹಾಕವಿ ಮೇಳ



(ಮಹಾಜನ ವನ. ಮೂಲೆಯಲ್ಲಿ ಬೆಂಚಿನ ಮೇಲೆ ಇಬ್ಬರು ಮಿತ್ರರು)

೧ **ಮಿತ್ರ:** ತಗೊಳ್ಳೊ. ತಿನ್ನೊ. ಮೈಗೊಳ್ಳೇದು, (ಎಂದು **ಕಳ್ಳೇಕಾಯಿ ಕೊಡುವನು**)

೨ **ಮಿತ್ರ:** ಥೂ! ಏನೊ! ಬೆಳಗ್ಗೆ ಎದ್ದು ಹಸಿ ಕಳ್ಳೇಕಾಯಿ........

೧ **ಮಿತ್ರ:** ಇದ್ಹೀಗೇ ತಿನ್ಬೇಕೊ, ಮೈಗೊಳ್ಳೇದು.

೨ **ಮಿತ್ರ:** ಪಿತ್ತಾ ಅಂತಾರೆ....

೧ **ಮಿತ್ರ:** ಅಂತಾರೆ-ಪೈತ್ಯ ಹತ್ತಿದೋರು. ಗಾಂಧಿಜೀನ್ ಕೇಳು.

೨ **ಮಿತ:** ಸರ್ಹೋಯ್ತು. ಕಳ್ಳೇಕಾಯ್ ತಿನ್ನೋಕೂ ಗಾಂಧೀನ್ ಕೇಳ್ಬೇಕೆ?

೧ **ಮಿತ್ರ:** ಅಯ್ಯೋ ಅಯ್ಯೊ. ಅವನ್ನ ಏನ್ಕೇಳ್ಬಹುದು, ಏನ್ಕೇಳ್ಬಾರ್ದು ಅನ್ನೋ ಹಾಗಿಲ್ಲ. ಕಳ್ಳೇಕಾಯಿ ತಿನ್ನೋದ್ರಲ್ಲಂತೂ ಅವನೆ ಕಲೀಫ!

೨ **ಮಿತ್ರ:** ಏನೋಪ್ಪ....ಆದ್ರೂ ಸುಟ್ಕೊಂಡ್ ತಿಂದ್ರೇನೇ ಚಂದ. ಅದರಲ್ಲೂ ಊಟ ಆದ್ಮೇಲೆ. ಹಾಳ್ಹೊಟ್ಟೇಲಿ....ಹಸಿ ಕಳ್ಳೆಕಾಯಿ....ಅದೂ ಬೆಲ್ಲ ಬೇರೆ ಇಲ್ಲ....ತಿಂದ್ ವಾಂತಿ ಮಾಡ್ಕೊ!........(**ಸುತ್ತಲೂ ನೋಡಿ**) ಥೂ! ಏನ್ ಹಾಳ್ ಪಾರ್ಕೊ! ಬೆಂಚ್ಹಾಕಿಸ್ದೋನು ಹಾಳ್ **ಆ** ಮರದ ಕೆಳಗೆ ಹಾಕಿಸ್ಬಾರ್ದಾಗಿತ್ತೆ! ಇದನ್ನೇ ಅಲ್ಲಿಗೆ ಎತ್ಕೊಂಡ್ಹೋಗೋಣಾಂದ್ರೆ....ಹೂತಿಟ್ಟಿಟ್ಟಿದಾನೆ, ಅವರಜ್ಜನ್ ಮುತ್ತಜ್ಜನ್ ಹೂತಿಟ್ಹಾಗೆ! (**ದೂರ ನೋಡಿ**) ....ಅದ್ಯಾರೋ ಅದು? ಬೋನ್ನಲ್ಲಿ ಓಡಾಡ್ದ್ಹಾಗೆ ಓಡಾಡ್ತಿದ್ದಾನೆ ಅಷ್ಟೊತ್ತಿಂದ?....ಪಾಪ! ಅವನ್ಗಾರೂ ಒಂದೆರಡು ಕೊಡೊ ತಿನ್ಲಿ. ಹೀಗಾರೂ ಗಾಂಧಿ ಭಕ್ತ ಆಗ್ಲಿ, ಕಳ್ಳೇಕಾಯಿ ಕುರುಕ್ತ (**ಈ ಮಾತು ಆಗುವಾಗ ಮೊದಲನೆಯ ಕವಿ ಅಲ್ಲಿ ಓಡಾಡುತ್ತಿರುವನು**)

೧ **ಕವಿ:** ಕ್ಷಮಿಸ್ಸಿ, ತಾವು ಎಷ್ಟೊತ್ನಿಂದ ಕೂತ್ಕೊಂಡಿರೋಣಾಗಿದ್ಯೊ ಇಲ್ಲಿ?

೧ **ಮಿತ್ರ:** ಯಾರು? ನಾವೇ?

೧ **ಕವಿ:** ಹೌದು. ತಾವೇ.

೧ **ಮಿತ್ರ:** ಇಲ್ಲಿ, ನಾವ್ಬಂದು, ಎಷ್ಟೊತ್ತಾಯ್ತೊ ಶಿಂಗಪ್ಪ?

೨ **ಮಿತ್ರ:** ಆಗಿರಭೌದು....ಒಂದ್ಕಾಲ್ಗಂಟೆ .... ಇಪ್ಪತ್ತಿಪ್ಪತ್ತೈದು ನಿಮಿಷ....ಅರ್ಧ ಗಂಟೇಗಿಂತ ಏನ್ ಹೆಚ್ಚಾಗಿಲ್ಲ.

೧ **ಕವಿ:** ಸರಿಯೆ. ತಾವ್ ಇಲ್ಲಿ ಬಂದಮೇಲೆ ಯಾರಾದರೂ....ಕೊಂಚ ದಪ್ಪಗೆ, ಮಂಡಗೆ, ದಟ್ಟಿ ದುಪಟಿ ಹಾಕ್ಕೊಂಡು....ಯಾರಾರೂ ಹೀಗ್ಬಂದು ತಮ್ಮನ್ನೇನಾರೂ ವಿಚಾರಿಸಿದ್ರೇನು?

೨ **ಮಿತ್ರ**: ಇಲ್ಲ. ನಾವು ಬಂದ ಲಾಗಾಯ್ತು ತಾವೊಬ್ರೇನೆ ಹೀಗೆ....ಇಲ್ಲಿ....ಬೋರ್ —ಅಲ್ಲ, ಓಡಾಡ್ತಿರೋವ್ರು, ನಮ್ಮನ್ನ ವಿಚಾರಿಸಿದವ್ರೂ ಈಗ ತಾವೇನೆ.

೧; **ಕವಿ**: ಕ್ಷಮಿಸ್ಬೇಕು. ತಮಗೆ ವೃಥಾ ತೊಂದರೆ ಕೊಟ್ಟೆ. ಆದ್ರೆ, ಇಷ್ಟು ಹೊತ್ಗೆಲ್ಲಾ ಇಲ್ಲಿ ಬಂದಿರ್ತೇನೆ ಅಂದಿದ್ರು, ನಂ ಸ್ನೇಹಿತರೊಬ್ರು. ಬಂದ್ಹೋದ್ರೇನೋ ಅಂತ ತಮ್ಮನ್ನ್ಕೇಳ್ದೆ. ಅಷ್ಟೆ. ಕ್ಷಮಿಸಬೇಕು. (**ಈಚೆ ಮುಂದೆ ಬಂದು, ತನಗೆ ತಾನೆ**) ಯಾವಾಗ್ಲೂ ಹೀಗೇ, ಪಾಪಿ. ಏಳೂವರೆ ಅಂತಂದ. ನಾರಣಾಚಾರಿ ಹೋಟ್ಲಲ್ ಕೇಸರಿಭಾತೂಂತ ದೊಡ್ಡಾಗಿ ಪ್ರೋಗ್ರಾಂ. ಏಳೂಮುಕ್ಕಾಲಾದ್ರೂ, ಮನುಷ್ಯನ ಮೂತಿ ಇಲ್ಲ....ಹುಂ! ಎಂಟಕ್ ಆಗ್ಲೆ ಹತ್ನಿಮಿಷ.... ಇವನ್ನ ನೆಚ್ಕೊಂಡು ಇಲ್ನಿಂತು ಹೊಟ್ಟೆ ಕಾಯ್ಸೋಕಿಂತ....ಎಂಟ್ಗಂಟೇಗೆ ವೆಂಕಟ್ರಾಯ ಆ ಪಾಟಿ ಹೋಟಲ್ನಲ್ಲಿ ಕಾಲಿ ದೋಸೇಗೆ ಬರೋ ಹೊತ್ತು.... ಹೋಗಿ ಅವನ್ನ ಹಿಡಿದು ಗೋಲನ್ ಮಾಡಿ ಗಿಟ್ಟಿಸ್ಕೊಂಡು....ಇವನೇನಾರೂ ಒಂದ್ವೇಳೆ ಅಷ್ಟೊತ್ತಿಗ್ಬಂದ್ರೆ....ನಾರಣಾಚಾರಿ ಹೋಟಲ್ ಕೇಸರಿಭಾತ್ಗೆ ಸೊನ್ನೆ ಬೀಳದ ಹಾಗೆ....ಅಧಿಕಸ್ಯ ಅಧಿಕಂ ಅಂತ....

(**ಇಬ್ಬರು ಮಿತ್ರರ ಹತ್ತಿರ ಪುನಃ ಬಂದು**) ....ತಿರಗೂ ತೊಂದರೆ ಕೊಡ್ತೇನೆ. ನಾನಾಗ್ಲೆ ಹೇಳಿದ್ನಲ್ಲ ಆ ಸ್ನೇಹಿತರು ಒಂದು ವೇಳೆ ಇಲ್ಬಂದ್ರೆ, ದಯವಿಟ್ಟು ನಾನ್ ಬರೋವರಗೂ ಇಲ್ಲೇ ಇರಬೇಕಂತೆ; ಎಂಟ್ ಹತ್ ನಿಮಿಷದಲ್ಲಿ ಬಂದ್ಬಿಡ್ತಾರಂತೆ-ಅಂತ ದಯಮಾಡಿ ತಿಳಿಸ್ತೀರಾ?

೧ **ಮಿತ್ರ**: ಅದಕ್ಕೇನ್ ಆಗಭೌದು. ತಿಳಿಸ್ತೇವೆ.

೧ **ಕವಿ**: Thank you very much. ಎಂಟ್ಹಂತ್ ನಿಮಿಷ, ಅಷ್ಟೆ. ಬಂದ್ಬಿಡ್ತೇನೆ ಅಂತ ಹೇಳಿ, ದಯವಿಟ್ಟು. (**ಗಡಿಯಾರ ನೋಡಿ**) ಎಂಟಕ್ ಐದ್ ನಿಮಿಷ! (**ಎಂದು ಹೋಗುವನು**)

೨ **ಮಿತ್ರ**: ಸ್ವಾಮೀ!

೧ **ಕವಿ**: (ಬಂದು) ಓ! ಏನು?

೨ **ಮಿತ್ರ**: ಸರಿ....ಹೇಳ್ಬೇಕೂ ಅಂದ್ರಿ, **ಯಾರಿಗ್** ಹೇಳ್ಬೇಕೂ? **ಯಾರ್** ಬಂದಿದ್ರೂಂತ ಹೇಳ್ಬೇಕೂ?

೧ **ಕವಿ**: ಓ! ನೋಡಿದ್ರಾ! ಮರ್ತೇಬಿಟ್ಟೆ. **ನಾ** ಬಂದಿದ್ದೇಂತ ಹೇಳಿದ್ರೆ ಸಾಕು. ನನ್ನ ಹೆಸರು ದೇವಪ್ರಿಯ ಅಂತ.

೧ **ಮಿತ್ರ**: (ನೆಗೆದೆದ್ದು) ದೇವಪ್ರಿಯ! S. K. ದೇವಪ್ರಿಯಾನೆ!?

೧ **ಕವಿ**: ಹೌದು, ಹೌದು, ಅವನೆ.

೧ **ಮಿತ್ರ**: ನಂ ಕನ್ನಡದಲ್ಲಿ "ಪೂರ್ಣಕುಂಭ" ಅಂತ ಪದ್ಯದ ಪುಸ್ತಕ ತಮ್ಮದೇ ಅಲ್ವೆ?

೧ **ಕವಿ**: ಹೌದು. ನನ್ದೇ ತಾವದನ್ನ ಓದಿದ್ದೀರೇನು?

೧ **ಮಿತ್ರ**: ಓದಿದ್ದೇನೆ. ಆದ್ರೂ ತಮ್ಮನ್ನ ಪೂರ್ಣವಾಗಿ ಅರ್ಥಮಾಡಿಕೊಳ್ಳೊ ಸಾಮರ್ಥ್ಯ....ಅಯ್ಯೋ! ನಿಂತಿದ್ದೀರಲ್ಲ! ಬನ್ನಿ, ಕೂತ್ಕೊಳ್ಳಿ (ಎಂದು ಬೆಂಚಿನ ಧೂಳು ಹೊಸೆಯುವನು)

೧ **ಕವಿ**; ಇಲ್ಲ. ನಾನು ಹೋಗಬೇಕಾಗಿದೆ....

೧ **ಮಿತ್ರ**: ಇಲ್ಲ, ಇಲ್ಲ. ತಾವು ಒಂದ್ಗಳಿಗೆ ಕೂತ್ಕೊಂಡೇ ಹೋಗ್ಬೇಕು. ತಮ್ಮಂಥಾವರ್‍ನ ನೋಡಬೇಕೂ, ಮಾತಾಡಿಸ್ಬೇಕೂಂತ ನನಗೆ ಬಹಳ ದಿವಸದಿಂದ ಆಸೆ....ಕೂತ್ಕೊಳ್ಳಿ....ಅಯ್ಯೋ! ಅಲ್ಲಿ **ಕಳ್ಳೇಕಾಯಿ**! (ಎಂದು ಕಿರುಚುವನು)

೧ **ಕವಿ**: ಓ!....ಏನ್ ಹೆದರ್ಕೋಬೇಡಿ. ಅದರ ಮೇಲೆ ಕೂತ್ಕೊಳ್ಳೊಲ್ಲ. (ಎಂದು ಕಳ್ಳೇಕಾಯಿ ಪೊಟ್ಣವನ್ನು ಕೈಲೆತ್ತಿಕೊಂಡು, ಗಡಿಯಾರ ನೋಡಿ) ನೋಡಿ. ಕೂತದ್ದಾಯ್ತು. ನಿಂಕೋರ್ಕೆ ತೀರ್‍ತು. ಇನ್ನಾನ್ ಬರ್‍ತೇನೆ. ನಿಮ್ಮುಪಕಾರ; ಇನ್ ಹತ್ನಿಮಿಷದಲ್ಲಿ ನಾ ಬಂದೇಂತ ಹೇಳ್ಬಿಟ್ಟು ಕೂರಿಸ್ಕೊಂಡಿರಿ ಅವನ್ನ (ಎಂದು ಹೋಗುವನು)

೧ **ಮಿತ್ರ**: (ಕುಣಿದು ಕುಪ್ಪಳಿಸುತ್ತ) ಲೋ! ಇವತ್ತು ಪುಣ್ಯ ಮಾಡಿದ್ವು, ಕಣೊ.

೨ **ಮಿತ್ರ**: ಮಾಡಿದ್ದೆ ಅಂತ ಬೇಕಾರೆ ಹೇಳ್ಕೊ. ದವಾಲಿ ಒಂದು ಬಾಕಿ........ ಅದ್ಯಾಕೆ ಹಾಗೆ ಕೈಕಟ್ಕೊಂಡ್ ನಿಂತಿದ್ದೆ-ಅವನ ಹೆಸರು ಕೇಳೂತ್ಲೂವೆ— ಅವನ್ನ ಕೂತ್ಕೋಂತ ಕೈ ಹಿಡಿದು ಕೂಡ್ಸಿ?

೧ **ಮಿತ್ರ** ಯಾಕೆ ಅಂದ್ರೆ! ಅವರು "ದೇವಪ್ರಿಯು" ಕಣೊ!

೨ **ಮಿತ್ರ**: ದೇವಪ್ರಿಯನೊ? ದೇವಾನಾಂಪ್ರಿಯಾನೊ?

೧ **ಮಿತ್ರ**: ದೇವಪ್ರಿಯು!

೨ **ಮಿತ್ರ**: ದೇವಾನಾಂಪ್ರಿಯು ಅಂದ್ರೆ ಏನು, ಗೊತ್ತೆ?

೧ **ಮಿತ್ರ**: ಹಾಗಂದ್ರೆ ಏನು?

೨ **ಮಿತ್ರ**: ದೇವಾನಾಂಪ್ರಿಯು ಅಂದ್ರೆ, ಪಾಣಿನಿ ಪ್ರಕಾರ, ಮುಂಕ್ದಿಣ್ಣೆ ಅಂತ.

೧ **ಮಿತ್ರ**: ಥೂ! ಬಿಡೊ! ಯಾವಾಗ್ಲೂ ತಮಾಷೇನೇ ನಿಂದು! ಆ "ಪೂರ್ಣಕುಂಭ" ಬರೆದವರು ಇವರೇ ಕಣೊ!

೨ **ಮಿತ್ರ** ಅದೂ ಕೇಳ್ದೆ.

೧ **ಮಿತ್ರ**: ಮತ್ತೆ....ಯಾಕೇಂತೀಯಲ್ಲ!?

೨ **ಮಿತ್ರ**: ಅದೇ....**ಯಾಕೇ** ಅಂತ?

೧ **ಮಿತ್ರ**: ಅರೇ! ಯಾಕೇ ಅಂದ್ರೆ; ಆತ **ಕವಿ** ಕಣೊ! ಗೊತ್ತಾಗ್ಲಿಲ್ವೆ?

೨ **ಮಿತ್ರ**: ನನಗೆ ಗೊತ್ತಾದ್ದು ಒಂದು; ಅವನು ನಿನ್ನ ಹಸಿ ಕಳ್ಳೇಕಾಯಿ ಪೊಟ್ಣ ಲಪಟಾಯಿಸಿಕೊಂಡು ಹೋದ್ದು!

೧ **ಮಿತ್ರ**: ಛೆ! ಪಾಪ! ಹೋಗೋ ಅವಸರದಲ್ಲಿ ಮರತು ತಗೊಂಡ್ಹೋಗಿರಬೇಕು. ಎಲ್ಲಾ ಬಿಟ್ಟು, ಕವಿಗಳು ಕಳ್ಳೆಕಾಯ್ನ ಕಿರೀತಾರೇನೊ ಹಲ್ನ?

೨ **ಮಿತ್ರ**: ಮತ್ಯಾತಕ್ ಕಿರೀತಾರೆ....ಹಲ್ನ?

೧ **ಮಿತ್ರ**: ಹೋಗೊ. ನೀ ಯಾವಾಗ್ಲೂ ಹೀಗೇ, ಯಾವುದು ಕಂಡ್ರೂ ಮರ್ಯಾದೆ ಇಲ್ಲ.

೧ **ಮಿತ್ರ**: ಅಂತೂ....ನಿನ್ನ ಕಳ್ಳೆಕಾಯಿ ಚೊಕ್ಕಟಾನೋ!

೧ **ಮಿತ್ರ**: ಹೋದ್ರೋಯ್ತು, ಬಿಡೊ. ಈ ಕವಿದರ್ಶನದ ಪುಣ್ಯದ ಮುಂದೆ....

೨ ಮಿತ್ರ: ಹೌದೌದು, ಈ ದರ್ಶನಕ್ಕೆ ದಫೇದಾರಿ ದುಡಿಯೋ ಪುಣ್ಯದ ಮುಂದೆ.

೧ ಮಿತ್ರ: ಲೊ! ಇಂಥ ಕವಿ ಯೋಗ್ಯತೆ ತಿಳೀಬೇಕಾದರೆ-ತಪಸ್ಮಾಡಿರ್ಬೇಕು.

೨ ಮಿತ್ರ: ಯಾರು? ನೀನೊ? ಅವನೊ?

೧ ಮಿತ್ರ: ನೋಡೊ; ಆವರ ಹೆಸರು ಕೇಳಿಲ್ಲ. ಅವರ ಪುಸ್ತಕ ಓದಿಲ್ಲ. ಸುಮ್ನೆ ಯಾಕೆ ಟೀಕೆ ಮಾಡ್ತೀಯ ಅವರ್ನ?

೨ **ಮಿತ್ರ**: ನಾ ಟೀಕೆ ಮಾಡ್ತಿರೋದು ಅವನ್ನಲ್ಲ. ನಿನ್ನ! ಅವನ ಯೋಗ್ಯತೆ ಎಷ್ಟೇ ಇರಲಿ........ನಿನಗ್ಯಾಕೆ ಈ "ಭೃತ್ಯಸ್ಥ ಭೃತ್ಯ ಪರಿಚಾರಕ ಭೃತ್ಯ ಭೃತ್ಯ"....ಈ ಜೋಹುಕುಂ ಜನ್ಮ? ನೆಟ್ಟಗ್ನಿಂತ; ಅವನು ಬರೆದದ್ದು ಚೆನ್ನಾಗಿತ್ತೇ, ಸಾಕ್ಷಾತ್ **ಹೀಗಾಡ್ದ**; ಚೆನ್ನಾಗಿರ್ಲಿಲ್ವೆ, ಸಾಕ್ಷಾತ್**ಹಾಗಾಡ್ದ**. ಅದು ಬಿಟ್ಟು....(ಎಂದು **ದೂರದಲ್ಲಿ ಎರಡನೆಯ ಕವಿಯನ್ನು** ಗಮನಿಸಿ)....**ಅದೋ ಆ**ಲ್ನೋಡು! ಅಲ್ಲಿ ಇನ್ನೊಂದ್ಪ್ರಾಣಿ! ಆ ನಿನ್ನ ಪೂರ್ಣ ಕುಂಭದ ಹಾಗೇ ತಳಾಯಿಸ್ತಿದೆ ನೋಡು! ಬೋನ್ನಲ್ಲಿ ಬಿದ್ಹಾಬ್ತು! ಹೋಗಿ, ವಿಚಾರ್ಸಿ ನೋಡು: ಆ ನಿನ್ನ ಪೂರ್ಣ ಕುಂಭ ಬಾಯ್ಬಿಟ್ಕೊಂಡು ಕಾದಿದ್ದ ಮುಚ್ಚಳ ಇದೇನೋ ಅಂತ!

೧ **ಮಿತ್ರ** ಆಜ್! ಹಾಗೇ ಅಂತೀಯಾ!?....ಹೂಂ ಕಣೊ! ಅವ್ನೇನೇ! ದಪ್ಪ! ದುಂಡ್ಗೆ! ಆ ದಟ್ಟಿ! ಆ ದುಪ್ಟಿ! ಹೂಂ ಕಣೊ! ಹೋಗ್ಕೇಳ್ಕೊಂಡ್ಬರ್ತೇನೆ! **(ಎಂದು ಹಾರುವನು)**

೨ **ಮಿತ್ರ**: ಛೆ ಛೆ ಛೆ ಛೆ ಛೆ ಛೆ! ಇವನು ಯಾವಾಗ **ಮನುಷ್ಯಾ** ಅಂತ ಆಗ್ತಾನೋ ನಾನ್ನೋಡೆ ಕಾಣೆ. ಕಣ್ಣಿಗೆ ಬಿದ್ದವ್ನ **ಕವಿ** ಅಂದ್ರೆ ಆಗ್ಹೋಯ್ತು....ಕರಗಿ ಕ್ರಿಮಿಯಾಗ್ಹೋದ ಇವ್ನು! ಇವನ ಹಸೀ ಕಳ್ಳೇಕಾಯಿ, ಇವನ ಹೊಸ ಕವಿಗಳು—ಎಲ್ಲಾ ಸರಿಯಾಗಿವೆ ಇವನ್ಗೆ!....ಅದೋ, ಬಂದ! (ದೃಷ್ಟಿಸಿ) ಸರಿ! **ಈ** ಸಾವಧಾನ ಪರಾಂಬರಿಸಿದರೆ, **ಈ** ಪ್ರಾಣೀನೂ ಕವೀಂತಾನೇ ಕಾಣುತ್ತೆ.

(ಪ್ರವೇಶ–ಮಿತ್ರ–೧, ಕವಿ ೨.)

೧ ಮಿತ್ರ ಹೀಗ್ಬನ್ನಿಯ್ಯಾಡಿಸ್ಬೇಕು....ಹೀಗೆ....ಇವನು ನನ್ ಸ್ನೇಹಿತ ಶಿಂಗ್ಲಾಚಾರಿ ಅಂತ....ಇವ್ರು, ಶಿಂಗಪ್ಪ, "ಘೂಮ್ರಾಕ್ಷ" ಅನ್ನೋ ಅಂಕಿತದಲ್ಲಿ ಸೊಗಸಾದ Love Songs ಬರದಿದಾರೆ. "ಹೂವಿನ ಗರಗಸ" ಅನ್ನೋದು ಇವರ ಸುಪ್ರಸಿದ್ಧ ಪುಸ್ತಕ ಇವರಿಗೇ ಆ ದೇವಪ್ರಿಯ ಅವ್ರು ಕಾಯ್ತಾ ಇದ್ದದ್ದು........ ಕೂತ್ಕೊಳ್ಳಿ. ಈಗ್ಲೇ ಬಂದ್ಬಿಡ್ತಾರೆ ಅವ್ರು, (ಎಂದು ಕೈ ಹಿಡಿದು ಕೂರಿಸುವನು)

೨ ಕವಿ: (ಕೂತು) ಓಹೊ! ನೀವಾಡೋದು ಕೇಳಿದರೆ....ನನ್ನ ಪುಸ್ತಕ ನಿಮಗೆ ಅರ್ಥವಾಗಿದೆ ಅಂತ ನಾ ತಿಳಕೊಬಹುದೆ?

೧ ಮಿತ್ರ: ಅಯ್ಯೋ! ಅಯ್ಯೋ! ಅಯ್ಯೋ! ತಮ್ಮಂಥ ಕವಿಗಳು ಬರೆದದ್ನ ನಮ್ಮಂಥ ಜನಸಾಮಾನ್ಯ ಅರ್ಥಮಾಡಿಕೊಳ್ಳೋದೂ ಅಂದ್ರೆ ಹುಡುಗಾಟಾನೆ?

೨ ಕವಿ: ನಿಜ. ನೀವ್ಹೇಳೋದು....ಒಂದು ದೃಷ್ಟಿಯಿಂದ....ನಿಜ.

೨ ಮಿತ್ರ: "ಒಂದು ದೃಷ್ಟಿಯಿಂದ"....ಅಂದ್ರೆ?

೨ ಕವಿ: ಅಂದ್ರೆ....ಒಂದು ದೃಷ್ಟಿಯಿಂದ ನಿಜ, ಇನ್ನೊಂದು ದೃಷ್ಟಿಯಿಂದ ಅಲ್ಲ.... ಅಂತ. ಈಗ ಉದಾಹರಣೇಗೆ....ನಮ್ಮ ಸ್ನೇಹಿತರು....ಇವರು....ಈಗ ತಾನೆ ಅಪ್ಪಣೆ ಕೊಡಿಸಿದ ಹಾಗೆ....ನಮ್ಮಂಥ ಕವಿಗಳು ಬರೆದ ಕಾವ್ಯಾನ ನಿಮ್ಮಂಥ ಜನಸಾಮಾನ್ಯ ಅರ್ಥಮಾಡಿಕೊಳ್ಳೊದೂ ಅಂದ್ರೆ....ನಾನ್ಹೇಳ್ದಂಗೆ, ಒಂದು ದೃಷ್ಟಿಯಿಂದ, ಹುಡುಗಾಟವೇ. ಯಾಕೇ ಅಂತೀರೋ: ಕೇಳಿ. ಜನಸಾಮಾನ್ಯದಲ್ಲಿ ಎರಡು ವಿಧ: ಪಂಡಿತರು, ಪಾಮರರು ಅಂತ. ಹಿಂದಿನ ಕಾಲದಲ್ಲಿ—ಈ Communal mess ಇದ್ದಾಗೆ—ಎರಡು ಗುಂಪಿಗೂ ಎರಡು ತರದ ಸಾಹಿತ್ಯಾನ್ನ ಬೇರೆ ಬೇರೆ ಬಡಸ್ತಾ ಇದ್ರು. ಪಂಡಿತರಿಗೆ "ನಾರಿಕೇಳಪಾಕ" ಅಂತಾನೂ ಪಾಮರರಿಗೆ "ದ್ರಾಕ್ಷಾಪಾಕ" ಅಂತಾನೂ ತಯಾರಿಸ್ತಿದ್ರು. ಆದರೆ ಈಗ, ಕಾಲ ಬದಲಾಯಿಸಿದ ಹಾಗೆಲ್ಲಾ—ಈ Cosmopolitan mess ಇದ್ದಾಗೆ—ಈ ಪಂಡಿತ ಪಾಮರ ಇಬ್ಬರಿಗೂ—ಆಗೋ ಹಾಗೆ ಒಂದು Via Media ಕಂಡ್ಹಿಡಿದಿದ್ದೇನೆ ನಾವು, ಆಧುನಿಕ ಕವಿಗಳು. ಇದು ದ್ರಾಕ್ಷಾಪಾಕದಷ್ಟು ಸುಲಭಾನೂ ಅಲ್ಲ—ಯಾಕೆ? ಪಂಡಿತರಿಗೆ ಇನ್ನೂ ಹಲ್ಲು ಗಟ್ಟಿಯಾಗಿದೆ—ಇದು ನಾರಿಕೇಳ ಪಾಕದಷ್ಟು ಕಷ್ಟಾನೂ ಅಲ್ಲ— ಯಾಕೆ? ಪಾಮರರು ಇನ್ನೂ ನಾರು ಸೀಳೋ ನಯ ಕಲಿತಿಲ್ಲ, ಕರಟ ಒಡೆಯೋ ಕಾಯ ಬೆಳೆಸಿಲ್ಲ....ಆದರೆ ನಮ್ಮ ಈ ಪಾಕ ಹೇಗಿದೆ ಅಂದರೆ: ಪಂಡಿತ ಪಾಮರ ಉಭಯ ಮನೋರಂಜಕವಾಗಿದೆ. ಇದನ್ನು ಯಾವ ಪಾಕ ಅಂತ ಕರೆಯೋಣ?....ಈ....ಈ....(ನೆಲದ ಮೇಲೆ ಕಳ್ಳಿಕಾಯಿ ಸಿಪ್ಪೆ ಗಮ-

ಸಿಸಿ, ಎತ್ತಿಕೊಂಡು) ಇದನ್ನು **"ಕಡಲೆಕಾಯಿ ಪಾಕ"** ಅನ್ನಬಹುದು. ಯಾಕೆ ಅಂತೀರೋ. ಈ ಕಡಲೆಕಾಯಿ ಸುಲಿದು ಬಿತ್ತ ತಿನ್ನೋದು ದ್ರಾಕ್ಷಿ ತಿನ್ನೋ ಅಷ್ಟು ಸುಲಭಾನೂ ಅಲ್ಲ, ತೆಂಗಿನಕಾಯಿ ತಿನ್ನೋಅಷ್ಟು ಕಷ್ಟಾನೂ ಅಲ್ಲ. ಇದೀಗ ನಾ ಹೇಳಿದ Via Media! (ಸ್ಫೂರ್ತಿ ಜೋರಿ, ಆವೇಶ ಏರಿ) ನಿಜಾನೇ! ಕಡಲೆಕಾಯಿ ಪಾಕ! **ಪಾ**ಮರನಿಂದ **ಪ್ರಾ**ರಂಬಿಸಿ **ಪಂ**ಡಿತನ **ಪ**ರಿಯಂತ! ಹೂಂ! **ಪಾ**ಕಂಪೂಪ್ಪಿನ ಸೀಯಿಂ ಪಿಡಿದು, ಪಾಯಸ **ಪ**ರಮಾನ್ನಗಳಿಂ **ಪಾ**ರಾಗಿ, **ಪು**ಳಿಯೋಗರೆಯ ಉ**ಪ್ಪು ಪು**ಳಿ ಕಾರಂಗಳ ವರೆಗೆ....ಫೆ ಫೆ ಫೆ ಫೆ ಫೆ ಫೇ! **ಪಕಾರಪ್ರಾಸ ಪೊಗದಸ್ತಾಗಿ ಪೋಣಿಸ್ಕೊಂಬಿಟ್ಟದೆ**? **ಪ**ದ್ಯಮಂ **ಪೆ**ಣೆಯಲ್ಕಿದುವೆ **ಪೊಳ್ತು**!....ದಯಮಾಡಿ ನೀವಿಬ್ರೂ ಆಚೆ ಒಂದಿಷ್ಟೂದ್ದಲ್ಲಿ ನಿಂತ್ಕೊಂಡ್ರೆ, ನನ್ನೊಂದು ಕವನ ಬರೆದ್ಕುಗಿಸ್ತೇನೆ, ಆವೇಶ ಆರ್‍ಹೋಗೋ ದ್ರೊಳ್ಗೆ! ದಯಮಾಡಿ ಆಚೆ ದಯಮಾಡಿ! (ಎಂದು ಅವರಿಬ್ಬರನ್ನೂ ಆಚೆಗೆ ಗುಡಿಸಿ, ಧುಡುಮ್ಮನೆ ಧ್ಯಾನಸಮಾಧಿಗೆ ಧುಮುಕಿ, ಕಾಗದದ ಮೇಲೆ ಬರಬರ ಬರೆಯುವನು.)

೨ **ಮಿತ್ರ**: (ರೇಗಿ) ಲೋ! ಇದೇನೋ **ಅತಿ** ಆಗ್ಹೋಯ್ತು!

೧ **ಮಿತ್ರ**: ಶ್ಯ್! ಕೂಗಬೇಡ್ವೋ. ಕವಿತೆ ಬರೀತಿಧಾರೆ!

೨ **ಮಿತ್ರ**: ನಿನ್ ಕವಿತೆ ಮನೆ ಕಾಯ್ಹೋಯ್ತು! ತಣ್ಣಗೆ ಕೂತಿದ್ದೋರ ಜೀವ ತಿಂದೇ ಹೋದ್ರೆ ಉಳದುಹೋದದ್ದೇನಿವನ್ಗೆ?

೧ **ಮಿತ್ರ**: ಲೋ! ನಿನ್ ದಮ್ಮಯ್ಯಂತೀನಿ ಕಣೊ! ಸುಮ್ನಿರೊ.

೨ **ಮಿತ್ರ**: (ಜುಗುಪ್ಸೆಯಿಂದ) ಕೂತಿರೋದು ನೋಡೊ....

೧ **ಮಿತ್ರ**: (ಮೆಚ್ಚಿನಿಂದ) ಕಮಲ ಪುಷ್ಪದ ಮೇಲೆ ಆದಿಕವಿ ಬ್ರಹ್ಮ ಕೂತ್ಹಾಗೆ!

೨ **ಮಿತ್ರ**: ಬ್ರಹ್ಮ! ನಿನ್ನ ತಲೆ! ಬೆಂಚಿನಮೇಲೆ ಬ್ರಂಹ್ಮಾಂಡದ ಭಾರ ಬಿದ್ಹಾಗೆ ಬಿದ್ಕೊಂಡಿರೋದು ನೋಡೊ! ಸಾರ್ವಭೌಮ! ಕುಕ್ಕರ್ಸಿರೋದು ನೋಡೊ: ಕಾಂಚನ ಗಂಗೆ ಕುಸ್ಕೊಂಡ್ಹಾಗೆ! ಹೋಗೊ! ಅವನಿಗೆ ನಸರೆ ಮಾಡಿ ಮುಸರೆ ಒಪ್ಸೊ!

೧ **ಮಿತ್ರ**: ನೋಡೋ ಶಿಂಗಪ್ಪ. ನಾನಾಗ್ಲೆ ಹೇಳ್ದೆ: ಇಂಥ ಕವಿಗಳ ಯೋಗ್ಯತೆ ತಿಳೀಬೇಕಾದ್ರೆ ತಪಸ್ಮಾಡಿರ್ಬೇಕೂಂತ....ನೀನಿಷ್ಟೆಲ್ಲಾ ಕೂಗ್ತಿಧೀಯಲ್ಲಾ— ನೋಡು, ಆತನ ಕಿವೀಗದೇನಾರೂ ತಾಗಿದ್ಯೇ ಅಂತ! ಇವನ್ನೇ ಕವಿಗಳು ಭಾವಸಮಾಧಿ ಅನ್ನೋದು. ನೋಡಯ್ಯ, ಹ್ಯಾಗ್ಕೂತಿಧಾರೆ!

೨ **ಮಿತ್ರ**: ಹ್ಯಾಗ್ಕೂತಿಧಾನಪ್ಪ? ಹೇಳು. ಅದನ್ನೂ ಕೇಳ್ಬಿಡೋಣ.

೧ **ಮಿತ್ರ**: ನೋಡೋ, ಶಿಂಗಪ್ಪ, ನಾನೆರಡು ಸಲ ಹೇಳ್ದೆ. ಬೇಕಾದ್ರೆ ಇನ್ನೂ ಹೇಳ್ತೀನಿ: **ಇಂಥಾ ಕವಿಗಳ ಯೋಗ್ಯತೆ ತಿಳಿಯೋಕೆ ತಪಸ್ಸು ಮಾಡಿರ**

**ಬೇಕು** ಅಂತ.... ನೋಡು: ಈಗ್ಸ್ಯಾಗೂ ಇಷ್ಟೊತ್ತು ಇಲ್ಲಿದ್ದದ್ದಾಯ್ತು, ಇನ್ನೊಂದ್ನೊಂಚ ಹೊತ್ತು, ಆ ದೇವಪ್ರಿಯ ಬರೋವರ್ಗೂ.... ನೋಡು. ಶಿಂಗಪ್ಪ: ನಮ್ಮಂಥ, ಅಲ್ಲ ನನ್ನಂಥ ಸಾಮಾನ್ಯನೆದುರ್ಗೇ ಇಷ್ಟು ಗಂಭೀರವಾಗಿ, ಇಷ್ಟು ಸರಸವಾಗಿ, ಇಷ್ಟು ರಸವತ್ತಾಗಿ ಭಾಷಣ ಮಾಡಿದ ಈ ಕವಿ.... ಇನ್ನೊಬ್ಬ ಸರಿಸಮಾನಸ್ಕಂಧನ ಜೊತೇಲಿ ಮಾತಾಡೋದನ್ನ ಕೇಳ್ಬಿಟ್ಟೇ ಹೋಗ್ಬೇಕೂಂತ. ಇಂಥಾ ಅವಕಾಶ ತಿರ್ಗ್ಗಿ ಸಿಕ್ಕೋಹಾಗಿಲ್ಲ. ಅಲ್ದೆ—ಇನ್ನು ಬರೀತಿದ್ದಾರೆ ನೋಡು—ಆ ಮಹಾಕಾವ್ಯಾನೂ ಕಿವೀಗ್ಹಾಕ್ಕೊಂಡೇ ಹೋಗ್ಬೇಕು.... ನೋಡು, ಆ ದೇವಪ್ರಿಯ ಬರೂತ್ಲೂ, ನಮುಗ್ಕೆಲ್ಸ ಇದೇಂತೆ ಹೇಳ್ಬಿಟ್ಟು, ನಾವಿಬ್ರೂ ಆ ಮರದ್ಹಿಂದೆ ಬಚ್ಚಿಟ್ಕೊಂಡು ಇವರ ಮಾತ್ಕೇಳೋಣ. ಈ ಇಬ್ಬರು ಮಹಾಕವಿಗಳ ಸಮಾಗಮ ಎರಡು ಮಹಾನದಿಗಳ ಸಂಗಮ!

೨ **ಮಿತ್ರ**: ಸ್ಸರಿ! ಇವತ್ಯಾಕೊ ಎದ್ಬಂದ್ಹೊತ್ತು ಚೆನ್ನಾಗಿಲ್ಲ!.... ಆಜ್, ರಂಗಸಾಮಿ 'ಕೋಣನೆರಡುಂ ಹೋರೆ ಗಿಡುವಿಂಗೆ ಮಿತ್ತು' ಅಂತಾನೋ ಏನೋ, ಅದ ರಾಘವಾಂಕನ್ದೇ?

೧ **ಮಿತ್ರ**: ರಾಘವಾಂಕ? ಯಾರದು? ಧಾರ್ವಾಡ್ದನ್ನೆ?

೨ **ಮಿತ್ರ**: ಉ ಹುಜ್ ಹುಜ್ ಹುಜ್! ನೀಲಗಿರಿ ಕಡೇವ್ನು! ಪಂಪನ ಭಾಮೈದ್ನ!

೧ **ಮಿತ್ರ**: ಪಂಪ? ಯಾರವ್ನು?

೨ **ಮಿತ್ರ** ಹೋಗ್ಲಿ ಬಿಡು. (ಗಮನಿಸಿ) ಅದೋ, ನಿನ್ನ ಪೂರ್ಣ ಕುಂಭ ಬಂತು.

**(ಮೊದಲನೆಯ ಕವಿಯ ಪ್ರವೇಶ)**

೧ **ಕವಿ**: ಎನ್ರೀ? ಬಂದ್ರೇನವರು?

೧ **ಮಿತ್ರ**: ಅದೋ, ಅಲ್ಲೇ ದಯಮಾಡಿಸಿದ್ದಾರೆ!

೧ **ಕವಿ**: ಓ! ಸರಿ! **(ಹೋಗತೊಡಗುವನು)**

೧ **ಮಿತ್ರ**: ನಾವ್ಬರ್ತೇವೆ. ನಮುಗ್ಬೇರೆ ಕೆಲಸ ಇದೆ.

೧ **ಕವಿ**: ಅಗ್ಬಹುದು, ಹೊರಡಿ. **(ಕವಿ ೨ ರ ಹತ್ತಿರ ಹೋಗುವನು)**

೨ **ಮಿತ್ರ**: ಒಂದು Thanks ಕೂಡ ಗಿಟ್ಲಿಲ್ವಲ್ಲೊ!

೧ **ಮಿತ್ರ**: ಶ್ಯ್! ಇಲ್ಬಾರೊ ಈಚೆ! **(ಎಂದು ಎಳದುಕೊಂಡು ಹೋಗಿ ಮರದ ಹಿಂದೆ ಅವಿತುಕೊಳ್ಳುವನು)**

೧ **ಕವಿ**: **(ಎರಡನೆಯವನ ಕೈಯ ಕಾಗದ ಕಿತ್ತುಕೊಂಡು)** ಏನೋ ಇದು?

೧ **ಕವಿ**: (ಹಿಂದಕ್ಕೆ ಕೀಳಲೆತ್ನಿಸಿ ಕೊಡೋ ಇಲ್ಲಿ.

**(ಪುಟ ೪೬ಕ್ಕೆ ಮುಂದುವರಿಯುವುದು)**

# ನೈವೇದ್ಯ



'ಪ್ರಜಾಹಿತ', 'ಸಾಟರ್‌ಡೆ ಟೈಮ್ಸು', ಅಂತ, ಕೂಕ್ಕೊಂಡ್ ಬಂದ್ನ ನಾ ಕೂತಿದ್ದ, ಗಾಡಿ ಹತ್ತಿರಕ್ಕೆ. ಎರಡು ಪೇಪರೂ ಕೊಂಡಕೊಂಡೆ. ಅವನ ಹತ್ತರ ಫಿಲಂಫ್ಯಾರ್ ಇದ್ದದ್ದು ಕಣ್ಣಿಗೆ ಬಿತ್ತು. ಮುಂಚೆ ಕಂಡಿದ್ರೆ, ಅಥವಾ, ಅವನು ಕೂಗಿದ್ರಾದ್ರು,ಅದನ್ನೇ ಕೊಂಡ ಕೊಳ್ಳತಿದ್ದನಲ್ಲಾ ಇವೆರಡಕ್ಕೆ ಬದಲು ಅನ್ನು ಕೊಂಡೆ. ಹೂ.... ಅದೂ ಇರಲಿ ಅಂತ ತಗೊಂಡದ್ದಾಯಿತು. ರೂಪಾಯಿ ಮುರಸಿದ್ದ ಚಿಲ್ಲರೆ ಜೋಬಿಗ್ಹಾಕೋ ಅಷ್ಟರಲ್ಲೆ, 'ರಸ್ ಬಾಳೆ ಹಣ್ಣು', 'ನಂ ಜನಗೂಡು ರಸ್ ಬಾಳೆ ಹಣ್ಣು' ಅಂದ, ದೊಡ್ಡ ಬಾಳೆ ಹಣ್ಣಿನ ಗೊನೆ ಹಿಡಿದಿದ್ದ ಒಬ್ಬ ಚಿಕ್ಕ ಹುಡುಗ. ಕೊಡಪ್ಪ ಒಂ ದಾಣೇದೂ ಅಂದದ್ದೇ ಕೆಲಸ, ಪೇಪರ ಗಳನ್ನೆಲ್ಲಾ ನನ್ನ ಪಕ್ಕದಲ್ಲಿ ಇಟ್ಟಕೊಂ ಡು ಬಾಳೆ ಹಣ್ಣನ್ನ ತಗೊಂಡೆ. ಅಲ್ಲೇ ಮೂಲೇಲಿ ಕೂತಿದ್ದ ಒಂದು ಮಗು, ಹೆಸರು ಮುರಾರಿಯಂತೆ, ಬಾಳೆ ಹಣ್ಣು ನೋಡಿ 'ನಂಗೊಂದೂಂ'ತು'-ಮಕ್ಕಳು ಕೇಳಿದರೆ ಕೊಡದವನು ಇವನ್ಯಾವ ಬಂಜೆ ಗಂಡಾನ್ಕೋತಾರೊ ಅಲ್ಲಿರೊ ಪ್ರಯಾಣೀಕರು ಅಂತ ಅಂದುಕೊಂಡು ಆ ಮಗೂಗೆ ಒಂದು ಕೊಟ್ಟೆ. ಬೆಲ್ಲು ಆಯ್ತು, ರೈಲೂ ಜರಗಿತು, ಹತ್ತಿದ ನಾಣಿ. ಅವನ್ಯಾವಾಗಲೂ ರೈಲ್ ಜರಗಿ ದಾಗಲೆ ಹತ್ತೋದು. ಅದೊಂದು ಶೋಕೂಂತ ತಿಳಕೊಂಡಿದಾನೆ. ಅವ ತ್ತು ಅರಸೀಕೆರೆ ಗಾಡಿ ರಾತ್ರಿ ಬರು ತಿದ್ದಾಗ ಪಾಪ, ಆ ಗಾರ್ಡು!, ರೈಲು ಹೊರಟಮೇಲೆ, ಹಾಸನದ ಹತ್ತರ, ಹತ್ತೋಕೆ ಹೋದ ಪೂರ್ತ ಜಾರಬಿಟ್ಟ. ಅಷ್ಟು ಅಭ್ಯಾಸ ಇರೋವರಿಗೆ ಏಷ್ಟೊ ಸಲ ಕೈಕೊಟ್ಟಬಿಡತ್ತೆ ರೈಲು, ನಾಣಿ ಯಾವತ್ತುಚಕ್ಕರ್ ತಿಂತಾನೊ, ಅದ್ಯಾ್ಯ ಗಾದರೂ ಇರಲಿ ಉಳಿದಿದ್ದ ಮೂರು ಬಾಳೆ ಹಣ್ಣಲ್ಲಿ ಒಂದರ ಪಾಲಿಗೆ ಮೃತ್ಯು ಬಂದ್ಹಾಗ ಬಂದ. ಅದೂ ಬೇಗ್ ಬೇ ಗ್ ತಿನ್ನೋ ಹೊತ್ತಿಗೆ ಉಳಿಬೆರಡಾದ್ರು ದಕ್ಕಿತು ನಂಗೆ. ತಿಂದು ತಿರಗತೀನಿ; ಪ್ರ ಜಾಹಿತ ಪಕ್ಕದವರು ಓದುತಿದ್ದರು. ಸಾ ಟರ್‌ಡೇ ಟೈಮ್ಸು ಸಾಹೇಬರ ಕೈಲಿತ್ತು. ಫಿಲಂ ಫ್ಯಾರ್ ಪತ್ತೆಯೇ ಆಗಲಿಲ್ಲ, ಒಂ ದು ಘಳಿಗೆ 'ನಿಮ್ಮದೇನ್ ಸಾರ್" ಅಂ ದರು ಯಾರೊ, 'ಏನೂಂದೆ'—ಇವರ ಹತ್ತಿರ ಇದೆಯಲ್ಲಿ ಫಿಲಂ ಫ್ಯಾರ್ ಅದೂಂ ತ ತೋರಿಸಿದರು ಕಣ್ಮರೆಯಾಗಿದ್ವನ್ನ ಹೊಂದೆ ಘಟ್ಟಿಯಾಗಿ. ಸ್ವಲ್ಪ ಇಸ ಕೊಡಿ ಸಾರ್' ಅಂತ ಹಲ್ಲೆಲ್ಲಾ ಹೊರ ಕ್ಕಬಿಟ್ಟರು. ತಾವು ನೋಡಬೇಕೂನ್ನೊ ಆತರದಲ್ಲಾದ್ರು ಸಧ್ಯ ಆ ಆಸಾಮಿ ಒಂ

ದ್ವೇಳೆ ಎಗರಿಸಿಕ್ಕೊಂಡು ಹೊರಟ್ಹೋಗ್ತಿದ್ದನೋ ಹೇಗೊ, ಅಂತು ಪತ್ರಿ ಹಚ್ಚಿ ಕೊಟ್ಟಿರಲ್ಲ-ಆಗಲೀಂವದ್ದೆ, ಇಲ್ಲಿ ಕೊಡಿ, ಕೊಟ್ಟೀಂತ ಅವರ ಹತ್ತರದಿಂದ ಇಸಕೊಂಡೆ ಓದೋಣಾಂತ! ಅಲ್ಲಾ! ಹತ್ತು ಹನ್ನೊಂದಾಣಿ ಖರ್ಚಮಾಡಿ ಖಪೇಪರ್ ಕೊಂಡ್‌ಕೊಂಡ ನನಗೇ ಓದೋಕೆ ಒಂದ್ ಪೇಪರೂ ಇಲ್ಲದ ಹಾಗಾಗಿತ್ತು. ಸ್ವಲ್ಪ ಇಸಕೊಡಿ ಅಂತ ಕೇಳಿದ್ದ ಪ್ರಭು ನನ್ನ ಬಳಿ ಬಂದು ಕೊಂಚ ಜರಗಿ ಇಲ್ಲೇ ಕೂರುತೇನೆ ಅಂದ್ರು. ಜರಗೋ ಅಷ್ಟರಲ್ಲೇ ಕೂತರು. ನನ್ನ ಮೇಲೊರಗ್ಕೊಂಡೇ ಓದೋಕೆ ಪ್ರಾರಂಭ. ಇಷ್ಟರಲ್ಲಿ ಸಾಟರ್‌ಡೇ, ಟೈಮ್ಸು ಒಂದೊಂದ್ ಷೀಟ್ ಒಬ್ಬೊಬ್ಬರ ಕೈಗ್ಹೋಗಿತ್ತು. ಪ್ರಜಾಹಿತಕ್ಕೆ, ಪಿನ್ನ ಹಾಕಿತ್ತು ಫರವಾಯಿಲ್ಲ. ಒಬ್ಬರಿಂದೊಬ್ಬರಿಗೆ ಹಾಗೇ ನಿಧಾನವಾಗಿ ಹೋಗುತಿತ್ತು. ಅಷ್ಟರಲ್ಲಾರೊ 'ನನ್ನ ರಾಶಿ ಒಂದು, ನೋಡಕೊಂಡ್ ಕೊಟ್ಟಬಿಡ್ತೇನೆ' ಎಂದರು. ಅವರು ತಮ್ಮ ರಾಶಿ ನೋಡಿ ಮುಗಿಸೊ ಹೊತ್ತಿಗೆ, ಸಾಟರ್‌ಡೆ, ಟೈಮ್ಸು ಲೂಸ್ ಷೀಟುಗಳು ನನ್ನ ಪಕ್ಕದಲ್ಲಿ ಒಂದು ರಾಶಿಯಾಗಿ ಬಿತ್ತು. ಪೇಪರ್ ತಗೊಂಡ ಪ್ರಭೃತಿಗಳು ಸರಿಯಾದ ರೀತೀಲಿ ವಾಪಸ್ಸು ನನ್ನ ಹತ್ತಿರ ಇಡಬಾರದೆ? ನನ್ನ ಪೇಪರ್ ಯೋಗಕ್ಷೇಮ ಕಟ್ಟಿಕೊಂಡು ಅವರಿಗೇನು? ಇಳಿದು ಹೋಗೋ ಆತರ, ಪಿನ್ಹಾಕ್ಹೋಗೋದು ನಿಗಾಕ್ಕೇ ಇಲ್ಲ. ಈ ಕಡೆ ನನ್ನ ಮೇಲ್ ಬಿದ್ದು ಬಾಯಿನ ಗಬ್ಬುವಾಸನೇನ ನನ್ನ ಮೂಗಿನ ನ್ಯಾರಕ್ಕೆ ಸರಿಯಾಗಿ ಬಿಡ್ತ, ಫಿಲಂ ಫ್ಯಾರ್ ಓದುತ್ತಿದ್ದ ಆಸಾಮಿಯಾದರೂ ಇಳದ್ಹೋಗಬಾರದಾಗಿತ್ತೆ ಅನ್ನಕೊಂಡರೆ ಆತ ಇಳೀಬೇಕಾದರೆ ಇನ್ನೂ ಮೂರು ಸ್ಟೇಷರ್ನ ಕಳೀಬೇಕಂತೆ—ಪುಣ್ಯಾತ್ಮ, ಓದಕೊಂಡ್ಹೋಗಲೀಂತ ಅವನ ಕೈಗೇ ಕೊಟ್ಟು, ನಾನೇ ಈ ಕಡೇಗೆ ಜರಕ್ಕೊಂಡೆ. ಆತನಿಗೆ ಓದೋಭರದಲ್ಲಿ ನನ್ನ ಮೇಲಿಂದ ಆ ಕಡೇ ಜರಕ್ಕೊಬೇಕೂನ್ನೊ ಪ್ರಜ್ಞೆಯೇ ಇರಲಿಲ್ಲ ಪಾಪ. ಈ ಸ್ಟೇಷರ್ನನ್ನಲ್ಲಿ ಯಾರೊ ಖಾಯಿಲೇ ಅವರು ನಮ್ಮ ಗಾಡೀಗೆ ಪ್ರಾಪ್ತವಾದರೂ. ಅವರ ಜೊತೇಲಿ ಔಷಧಿ ಶೀಶಿಯೂ ಹಾಜರು. ಔಷಧಿ ಕುಡಿಯೋಕೆ ಇನ್ನೂ ಅವಕಾಶವಾಗಿರದೆ ಅವಸರವಸರವಾಗಿ ರೈಲು ತಪ್ಪಿಸಕೊಬಾರದೂಂತ ಬಂದ್ ತಲಪಿಕೊಂಡಿದ್ದರು. ಹತ್ತೋಭರಾಟೀಲಿ ಶೀಶಿ ಕಾರ್ಕು ಕಳಕೊಂಡು ತಾತ್ಕಾಲೀಕವಾಗಿ ಬೆಟ್ಟನ್ನೇ ಬಿರಡೆ ಮಾಡಿಟ್ಟಕೊಂಡಿದ್ದ ಖಾಯಿಲೆ ಅವರ ಸಂಬಂಧೀಕ ಗಟ್ಟಾಮುಟ್ಟಾಗಿದ್ದ ಧಾಂಡಿಗ, ನನ್ನ ಪಕ್ಕದಲ್ಲಿದ್ದ ಪೇಪರ್ ರಾಶಿಯಿಂದ ಕೇಳದೆ ಮಾಡದೆ ಒಂದು ಹಾಳೆ ಎಳಕೊಂಡಿದ್ದೇ — ಕಾಗದದ ಬಿರಟಿ ಮಾಡಿ ಶೀಶೇಗೆ ಸಿಕ್ಕಿಸಿ, 'ಉಶ್ಕಪ್ಪಾಂ'ತ ಆ ಕಡೇಗಿರಿಸಿ ಸುಸ್ತು ಸುದಾರಿಸಿ ಕೊಳ್ಳೋಕೆ ಪ್ರಾರಂಭ. ಇಷ್ಟನ್ನು ದಿಗ್ಭ್ರಾಂತನಾಗಿ ನೋಡುತ್ತಿದ್ದ ನನಗೆ 'ಪೇಪರ್ ಯಾಕ್ ಹರದರೀ'ಂತ ಆ ಧಾಂಡಿಗನ್ನ ಕೇಳೋಕೆ ಧೈರ್ಯವೇ ಬರಲಿಲ್ಲ. ಹಾಗೆ ಕೂತುಕೊಂಡು ಹಾಳೆಗ

ಳಿಲ್ಲಾ ಜೋಡಿಸಿ ಇಟ್ಟ್ಟ ಪ್ರಜಾಹಿತ ನೋಡೋಣಾಂತ ಕೈಗೆ ತಗೊಂಡೆ. ಹತ್ತಾರು ಜನಕ್ಕೆ ಉಪಯೋಗವಾಗಿ ಅದರವಸ್ಥೆ ಆ ಪರಮೇಶ್ವರನಿಗೂ ಬೇಡ, ಆ ಸ್ಥಿತೀಗೆ ಬಂದ್ಹೋಗಿತ್ತು. ಗೌಡೊಬ್ಬ; ಬುದ್ಧಿ ಆ ಜಗಳದ ವಿಸ್ಯಾ ಏನಾದರೂ ಐತ್ರಾ ಅಂದ. ಚಿತ್ತಶುದ್ಧಿಯಾಗಿ ನಾ ದುಡ್ಡು ಕೊಟ್ಟುಕೊಂಡ, ನನ್ನ ಹತ್ತಿರಾ ಇರೊ, ನನ್ನ ಸ್ವತ್ತಾಗಿರೊ ಪೇಪರಲ್ಲಿ ಎ ರ ಡ ಕ್ಷ ರಾ ಓದಿಕೊಳ್ಳೊಣಾಂಸ್ರೆ ಎಷ್ಟುಪ್ಪಾ ತೊಂದ್ರೆಗಳು. ಅನ್ನಕೊಂಡು 'ನನಗೇನೂ ತಿಳೀದಯ್ಯಾ' ಅಂದದ್ದೇ ಕೆಲಸ ಪೇಪರ್ ಕಡೆ ಗಮನ ಕೊಡೋಕೆ ಹೋದ್ರೆ-ನಾಣಿ ಇಳಿಯೋ ಸ್ಟೇಷನ್ ಬಂತು. 'ಪ್ರಜಾಹಿತ ಸ್ವಲ್ಪ ಕೊಡ ತೀಯಾ' ನೆಕ್ಸ್ಟ ಟ್ರಿಪ್ಗೆ ಊರಿಗೆ ಬಂದ್ ಬಿಡತೇನೆ, ಹಾಗೆ ನಿಮ್ಮ ಮನೇ ಮೇಲೆ ಹೋಗ್ತಾ ಮನೇಲಿ ಹಾಕಿ ಹೋ ಗತೇನೆ ಅಂದ. ಸರಿಹೋಯ್ತಲ್ಲ ಅಲ್ಲೀ ಗೆ....ದಾಕ್ಷಿಣ್ಯಾ....ಸುಮ್ಮನಾದೆ. ಫಿಲಂ ಫ್ಯಾನ್ ಇನ್ನೆರಡು ಸ್ಟೇಷ್ಣ ಬರೋ ವರೆಗೂ ಆತ ಬಿಡೋಹಾಗಿಲ್ಲ. ಪ್ರಜಾ ಹಿತ ನಾಣಿ ವಶವಾಯ್ತು. ಉಳಿದಿರೊ ಸಾಟರ್ ಡೇ ಟೈಮ್ಸಲ್ಲಿ ಸ್ವಾರಸ್ಯ ಏನಿರ ಬಹುದು ಸವಿಯೋಣಾಂತ ಸಡಗರ ದಿಂದ ಸುತ್ತ ಮುತ್ತಾ ನೋಡ್ತೇನೆ.... ಎದುರಿಗೆ ಕೂತಿದ್ದ ಧಾಂಡಿಗ ಅದರ ಮೇಲೆ ಬಂದು ಕೂತಿಧಾನೆ. 'ಸ್ವಲ್ಪ ಏಳಿ ಪೇಪರ್ ತಗೊತೇನೆ' ಅಂದುಬಿಟ್ಟೆ ಈ ಸರ್ತಿ ಧೈರ್ಯವಾಗಿ. ಹರದ್ಹೋಗಿತೆ, ಹಳೇದೊಂತ ಕಾಣತ್ತೆ-ಅದ್ಯಾಕ್ ಓದ ತೀರಿ ಬಿಡಿ' ಅನ್ನೋಣೆ. ಹರಿದವನವನ್ನೆ, ಆದರ ಮೇಲೆ ಕೂತಿರೋದೂ ಅಲ್ಲದೆ ಓದ್ ಬೇಡಿ ಅಂತ ಉಪದೇಶ ಬೇರೆ. 'ಓದೋಲ್ಲ....ಶಖೆ .... ಬೀಸ್ ಕೋತೇನೆ ಕೊಡಿ' ಅಂತ ನಾ ಅನ್ನೋ ಹೊತ್ತಿಗೆ ಸರಿಯಾಗಿ, ಖಾಯಿಲೆ ಪ್ರಾಣಿ ಶಖೆ ತಡೆ ಯೋಕೆ ಆಗತಾ ಇಲ್ಲಾಂದ. ಧಾಂಡಿಗ ಖಾಯಿಲೇ ಅವನ್ನ ತೋರಿಸ್ತಾ, 'ನಮ್ಮ ಸೋಮು, ಇವನ ಸೋದರ ಮಾವ ಇವ ನ್ಗೆ ಸರು ಕಂಠಿ, ಕಾಮಾಲೆ ಬಂದು ಕನಿ ಷ್ಟಪಕ್ಷ ೩ ತಿಂಗಳಾಗಿರಬೇಕು, ಆಮೇಲೆ ಅವನ ಕಡೆ ತಿರಗಿ, 'ಶಖೇ ಏನೋ?' ನನ್ನ ಕಡೆ ಮಾತು ಬೀರುತ್ತಾ, ಸ್ವಲ್ಪ ಬೀಸಿಕೊಟ್ಟಬಿಡತೀನಿ. ನಿಮ್ಮದೋ ಪೇ ಪರು ಅಂತ ಕೊನೇಗೂ ಕೇಳದ. ಬೀಸಿದ, ಬಂದ ಸ್ಟೇಷ್ಣಲೇ ಇಳಿದರು. ಪೇಪರೂ ನನ್ನ ಕೈಗೆ ಬಂತು, ಶನಿಯೂ ತೊಲ ಗಿದ. ಮನಸ್ಸಿಗೊಂದು ಸಮಾಧಾನ ಆಯ್ತು, ನನ್ನ ಪೇಪರೂಂತ ಕೊನೇಗೂ ಗೊತ್ತಾಯ್ತಲ್ಲಾ ಅವನಿಗೆ. ಇಲ್ಲಿ ನಮ್ಮ ಲಾಯರೂ ಅವರ ಗುಮಾಸ್ತ್ರೂ ಹತ್ತಿ ದರು ಗಾಡೀಗೆ. ಮುಂದಿನ ಸ್ಟೇಷ್ಣನ್ನೇ ನಮ್ಮೂರು, ಅಷ್ಟರಲ್ಲಿ ಏನೋದೋಕಾ ಗತ್ತೆ. ಫಿಲಂ ಫ್ಯಾನ್ ಮ್ಯಾಗ್ ಸೇನ್ ನ್ನಲ್ಲಿರೊ ಪಿಕ್ಚರ್ಸ ನೋಡೋ ಹೊತ್ತಿಗೆ ಊರು ತಲಪಕೋಬಹುದು ಅನ್ನಕೊ ಳ್ಳೊ ಅಷ್ಟರಲ್ಲಿ ಲಾಯರ್ ಗುಮಾಸ್ತರು ಯಾವದೋ ಕಾಗದದ ಚೂರು ತೆಗೆದು ಲೆಕ್ಕಾಚಾರ ಹಾಕೋದಕ್ಕೆ ಈ ಮ್ಯಾಗ ಸೈನನ್ನೇ ಒತ್ತಿಗೆ ಕೇಳಿದ್ರು, ಪಡೆದರು. ಕೊನೇಗೆ ಹರಕಲು ಸಾಟರ್ ಡೆ ಟೈಮ್ಸಿ

ಗತಿ. ಅವರಲ್ಲಿ ಏನು ನ್ಯೂಸ್ ಪಿಕ್ಚರ್ಸ್ ಬಂದಿದೆ, ತಿಂವಿಹಾಕಿ ಊರು ಸೇರೋದ ರೊಳಗೆ ಕೊಂಡುಕೊಂಡ ಪೇಪರಿನ ಕಿಂಚಿತ್ ಉಪಯೋಗವನ್ನಾದರೂ ಹೊಂದೋಣಾಂತ ಹೊರಟರೆ, ಲಾಯರು....ಹೀಗ್ ಕೊಡುಹುರಿ, ಹರದನಹಳ್ಳಿ ಹಾಲಪ್ಪನ ಕೇಸಿನ ಡೀಟೈಲ್ಸ್ ಏನಾದರೂ ।ಬಂದಿದೆಯೆ ನೋಡೋಣ ಅನ್ನೋಣೆ. ರೇಗಿತು. ಆ ದಾಕ್ಷಣ್ಯಕ್ಕೆ, ನಮ್ಮೂರ ಲಾಯರು. ಕೊಟ್ಟುಬಿಟ್ಟೆ ನಾ ಕೊಂಡ ಪೇಪರು ನನಗೇ ಓದೋಕೆ ಆಗದೇ ಹೋದ ನನ್ನ ಕೇಸನ್ನ ಲಾಯರ ಮುಂದಿಟ್ಟೆ. ಹೇಗಾದೀತು ಓದೋಕೆ, ಅನ್ನೋ ವಾದ ಹೂಡೇ ಹೂಡಿದರು. ಅದು ಬರೀ ವಾದ. ವಾದದಿಂದ ಪ್ರಯೋಜನವೇನು? ನಡದಿರೊ ನಡಿಗೆ ನಿಮಗೇ ನೇವೇದ್ಯವಾಗಿದೆ. ಸಾಕು ತಾನೆ—

—ಎಸ್. ಎಸ್. ಕೆ.

---



ಸಾಮ್ರಾಜ್ಯ ಸಿಂಹಕ್ಕೆ ಬೊಜ್ಜು ಬಾಯಂತೆ.

# ಭೀಃ

(ಪಿ. ಸೀ. ಅವರ ಕ್ಷಮೆ ಬೇಡಿ—.)



ಮನೆಯ ಸದ್ದನು ತೂರಿ ತುಂಬುತಿದೆ ಹಬ್ಬುತಿದೆ,
ಭಿತ್ತಿಗಳ ಗಟ್ಟಿಯಿಟ್ಟಿಕೆಯು ಕೊರೆಯುತಿದೆ,
ಉಳಿದೆಲ್ಲ ಗದ್ದಲವ ಮುಳುಗಿಸುತೆ ಮೊಳಗುತಿದೆ,
ಸಾವ ಹೆದ್ದಾರಿಯನು ಹಿಡಿದೆತ್ತಿ ತೋರುತಿದೆ
—ಭೀಃ! ಭೀಃ! ಭೀಃ! ಎಂಬ ಭೀಕರ ಕೂಗು;
ಐವತ್ತು ವರುಷದವಧಿಯ ಮೆಟ್ಟಿ ಕೇಳುತಿದೆ
ದಾರಿಯಲಿ ಸಂಚರಿಪ ಬಸ್ಸ ಘೂಂಕಾರ.

ಪಾಠಶಾಲೆಗಳು ಆಫೀಸು ಅಂಗಡಿಯಿಂದ,
ತುಂಡು ತುಕಡಿಯನುಟ್ಟು ಗಿರಣಿಯೊಳಗಿಂದ,
ಹೂದೋಟದೊಳಗಿಂದ, ಸೆರೆಯಮನೆಯೊಳಗಿಂದ,
ಬಂದು ರಸ್ತೆಯಲಿ ನಡೆಯುತಿಹರಿಗೆ ಕೇಳುತಿದೆ;
—ಭೀಃ! ಭೀಃ! ಭೀಃ! ಎಂಬ ಕೂಗೇಳುತಿದೆ;
ಹೇಡಿತನದೆಲ್ಲರನು ಬೆದರಿಸುತೆ ಚೆದರಿಸಿದೆ;
ವೀರ ಸಂಚಯವಿದು ಎನದೆ ಓಡಿಸುತಿದೆ.

ಇರಬೇಕೆಂದರೆತ್ತಲಾತ್ಮವನು ಉಳಿಸಿಹರು?
ಬಲಕೆಡಕೆ ಹಾಯ್ವವರು ಏಗೈವರು?
ನುಗ್ಗುತಿಹ ಬಸ್ಸ ಭೀಕರಾಕೃತಿಗೆ ಬೆದರುವರು
ಎಂದೆಲ್ಲಿ ಬದುಕಿಹರು ಎಂದೆಮ್ಮ ಕೇಳುತಿದೆ,
—ಭೀಃ! ಭೀಃ! ಭೀಃ! ಈ ಯಗ್ಗೆನಿಪ ಮೊಳಗು
ನರರ ಎದೆಯೆಲುಬುಗಳ ಕಿತ್ತಿಟ್ಟು ಮೊಳಗುತಿದೆ,
ಜನರ ಮನದೊಳು ಭೀತಿಯನು ತುಂಬುತ್ತಿದೆ.

ನಿಲ್ಲಿಸದು ಕೂಡಿಸದು ಮಲಗಿಸದು ನುಗ್ಗುವುದು
ಆಟವಾಡುವ ಎಳೆಯ ಕೂಸುಗಳ ನಡುವೆ!
ದಾರಿಯಲಿ ಕಣ್ಣು ಮುಚ್ಚದೆಯೆ ಬರುತಿರಲತ್ತ
ವೇಗಾವೇಶದಲಿ ಮೇಲೊತ್ತುತಲೆ!
    ಭೀಃ! ಭೀಃ! ಭೀಃ! ಇದೆ ಮಂತ್ರವೆನ್ನುತ್ತೆ
ಎಂಟುದಿಕ್ಕಿನ ಗಾಳಿಗುಸಿರೆತ್ತಿ ಊದುತಿದೆ!
    ನೀಳ್ಗೊರಳ ತುತ್ತೂರಿಯ ನದನೂದುತಿದೆ!

ದಾರಿಯಿಕ್ಕೆಲದ ಜಗಲಿಯೆರಡರ ಮೇಲೆ ನಿಂತೇವು!
ಅವರವರಬ್ಬರವು ನಡುಗಿಸೀತು!
ಸುರೆಯೆಂಬ ಪಾನವನು ನಡೆಸುವವ ಕುಡಿದಂದು
ದಾರಿ ಜಗಲಿಯು ಮೇಲೆ ಯಾರು ಎಲ್ಲಿರಲೇನು?
    ಭೀಃ! ಭೀಃ! ಭೀಃ! ಎಂದು ಕೂಗುವ ಬಸ್ಸು
ಕತ್ತಲಲು ಬೆಳಕಲ್ಲು ನರಕವನು ಕಾಣಿಪುದು!
    ನೆಲದ ಮೇಲಿರುವುದೇ ತಪ್ಪೆಂದು ತೋರುವುದು!

ಬೆ. ಚಂ.

---

ಸ್ಥಳೀಯ ಪೌರಸಭೆಯ ಕಾರ್ಯಕಲಾಪಗಳನ್ನು ತಿಳಿಯಲು ನೆರೆಯೂರಿನ ನಾಲ್ವರು ಬಂದಿರುವರಂತೆ. ಬಂದಿರುವ ಹಾಸ್ಯಾಭಿಲಾಷಿಗಳಿಗೆ ಸುಸ್ವಾಗತ.

* * * *

ದೇವಿಕಾ ರಾಣಿಯ ಚಿತ್ರವೊಂದನ್ನು ನಮ್ಮ ಚಿರಂಜೀವಿಗೆ ತೋರಿಸಲು, ಅವನು 'ಅಪ್ಪಾ ಲಕ್ಸ್ ಸೋಪೇ ಇಲ್ಲವಲ್ಲಾ ಇವಳಹತ್ತಿರ' ಎಂದನು.

* * * *

ಸಿಡಿಲು ತಗುಲಿ ಹಾರ್ಮೋನಿಯಂ ಅಂಗಡಿಯೊಂದು ಸುಟ್ಟುಹೋಯಿತೆಂದು ಸುದ್ದಿ.

ನಮ್ಮೂರಿನಲ್ಲಿ ಸಿಡಿಲು ಸಾಕಷ್ಟು ಬೀಳುವುದಿಲ್ಲವಲ್ಲಾ ಎಂದು ನಮ್ಮ ದುಃಖ.

# ಸಾಹಿತ್ಯಕ್ಕೊಂದು ಸಹಾಯ

ನಮ್ಮ ಸಾಹಿತ್ಯದಲ್ಲಿ ಇದು ಪರ್ವಕಾಲ. ಈ ಸಾಹಿತ್ಯ ಪ್ರೂರ್ವದಲ್ಲಿ ಪ್ರಾಚೀನದ ಶಿಖರೇಶ್ವರದಲ್ಲಿ ನಿಂತು ರಾಜಕುಲಕ್ಕೆ, ಶ್ರೀಮಂತ ಸಮುದಾಯಕ್ಕೆ, ವಿಬುಧವ ರೇಣ್ಯಾರಣ್ಯಕ್ಕೆ ಬೆಳಕಿನ ಪ್ರಭೆಯನ್ನು ಪ್ರಸರಿಸಿತು; ತಿಳಿವಳಿಕೆಯ ತಿಳಿನೀರಿನ ಹೊಳೆಯನ್ನು ಹರಿಸಿತು. ಈಗ ಮತ್ತದು ಆಧುನಿಕ ಶಿಖರದಡಿಯಲ್ಲಿ ನಿಂತು ತನ್ನ ದೊಂದು ಕೈ ನೀಡಿ ಅಜ್ಞಾನ ಕೂಪದಡಿಯಲ್ಲಿ ಮುಳುಗಿರುವ ನಮ್ಮೆಲ್ಲರನ್ನೂ ಹಿಡಿದು, ಮತ್ತೊಂದು ಕೈಯನ್ನು ನೀಲಿಮೆಯು ತುಂಬಿರುವ ಗಗನದ ಕಡೆ ತೋರುತ್ತ, ನಮ್ಮನ್ನು ಆಗಭೀರ ಸಾಗರದ ಆಚೆಯ ತಡಿಗೆ ಕರೆದೊಯ್ಯುವಂತೆ ತೋರುತ್ತದೆ. ಈ ಅಂತ್ಯ ಈಗಲೆ ತಮಗೆ ಬೇಡವೆಂದು ಕೆಲವರೂ, ತಮಗೆ ಆಗಲಿ ಇದರ ರುಚಿ ತಿಳಿದಿದೆಯೆಂದು ಕೆಲವರೂ, ಹೇಳುತ್ತಿದ್ದರೂ, ನವೀನ ಮಾನವನೆಂಬ ಹೆಸರಿಗೆ ಯೋಗ್ಯನಾದ ಪ್ರತಿಯೊಬ್ಬನೂ ಇದರಿಂದ ಸುಖಾಮೃತವನ್ನು ಸವಿಯುವುದರಲ್ಲಿ ಸಂದೇಹವಿಲ್ಲ.

ನಮ್ಮ ಸಾತ್ಯದಿಂದ ಪ್ರಯೋಜನವು ಸಂತತವಾಗಿ, ಧಾರೆಯಾಗಿ, ಅವಿಚ್ಛಿನ್ನವಾಗಿ ಹರಿಯಬೇಕಾದರೆ, ನಾವು ಅದನ್ನು ಬಲಪಡಿಸಬೇಕು. ಇದಕ್ಕಿರುವ ಹಲವು ಮಾರ್ಗಗಳಲ್ಲಿ ಭಾಷಾಂತರ ಒಂದು. ತಾಯ್ನುಡಿಯ ಮೇಲಿನ ಮಮತೆಯಿಂದಲೂ, ನನ್ನಂತೆ ಅಜ್ಞಾನವೆಂಬ ಕುರುಡನ್ನು ನೀಗಲೂ, ಜ್ಞಾನಾರ್ಜನೆ ಮಾಡಲೂ ಆಸಕ್ತರಾಗಿರುವ ನನ್ನ ಭ್ರಾತೃಗಳಿಗೆ ಸಹಾಯ ಮಾಡಬೇಕೆಂಬ ಕುತೂಹಲದಿಂದಲೂ ನಾನು ಈ ಭಾಷಾಂತರ ಕಾರ್ಯವನ್ನು ಕೈಗೊಂಡಿದ್ದೇನೆ. ಕೆಲವು ಪಾಶ್ಚಾತ್ಯ ಲೇಖಕರು ಕನ್ನಡಿಗರಿಗೆ ಆಗಲೆ ಪರಿಚಿತರಾಗಿದ್ದಾರೆ. 'ಭಾಷಾಂತರಗಾರರು ಕೊಲೆಗಾರರು' ಎಂಬ ಗಾದೆ ಇರಬಹುದು. ಇದರಿಂದ ಇದುವರೆಗೆ ಭಾಷಾಂತರಗಾರರಿಗೂ, ಮೂಲಪ್ರಭೃತಿಗೂ ಪ್ರಾಣಹೋಗಿಲ್ಲ. ಈ ಎರಡು ಕಾರಣಗಳಿಂದಲೂ ನನಗೆ ಧೈರ್ಯ ಬಂದಿದೆ.

ನಾನು ಆರಿಸಿರುವ ಕವಿ ಷೇಕ್ಸ್‌ಪಿಯರ್. ಕೈಗೊಂಡಿರುವ ಕೆಲಸ ಕಷ್ಟ. ಆದ್ದರಿಂದ ಹಲವು ಮಹನೀಯರ ಸಲಹೆ ಕೇಳಿದೆ. ಅವರು ಉದಾರ ಮನಸ್ಸಿನಿಂದ ಬರೆದ ಪತ್ರಗಳ ಕೆಲವು ಭಾಗಗಳು ಇಲ್ಲಿ ಉದ್ಧೃತವಾಗಿವೆ.

ಪೂಜ್ಯರೂ, ವೃದ್ಧರೂ ಆದ ನಂಜಪ್ಪನವರು (ಅಖಿಲಕಣಾ/ನಾ (ಬೇಡದೆ ಇರುವುದನ್ನು ಹೊಡೆದುಹಾಕಿ)ಟಕ ಯುವಜನ ಸಮ್ಮೇಳನದ ಅಧ್ಯಕ್ಷರು) ಹೀಗೆ

ಹೇಳಿದ್ದಾರೆ:—"ಯುವಕರ ಮೇಲೆ ತಮ್ಮ ಕೃತಿ ಕೆಟ್ಟ ಪರಿಣಾಮವನ್ನು ಉಂಟು ಮಾಡಬಾರದು. ಆದ್ದರಿಂದ 'ಆಟೋಲಿಕಸ್' ಪಾತ್ರವನ್ನು 'ವಿಂಟರ್ಸ್ ಟೇಲ್' ಇಂದಲೂ 'ಪ್ಯಾಂಡಾರಸ್' ಪಾತ್ರವನ್ನು 'ಟ್ರಾಯ್‌ಲಸ್ ಮತ್ತು ಕ್ರೆಸ್ಸಿಡ' ಇಂದಲೂ ಪೂರ್ತಿಯಾಗಿ ತೆಗೆಯಬಹುದು. 'ರೋಮಿಯೊ ಮತ್ತು ಜೂಲಿಯೆಟ್,' 'ಆಂಟೊನಿ ಮತ್ತು ಕ್ಲಿಯೊಪಾತ್ರ,' ಮತ್ತು 'ವೀನಸ್ ಮತ್ತು ಅಡೋನಿಸ್' ಈ ಕೃತಿಗಳನ್ನು ತಮ್ಮ ಗ್ರಂಥದಲ್ಲಿ ಸೇರಿಸದಿದ್ದರೆ ನಮ್ಮ ಯುವಕ ಕಾಲಕ್ಕೂ, ಷೇಕ್ಸ್‌ಪಿಯರ್‌ಗೂ, ಷೇಕ್ಸ್‌ಪಿಯರ್ ವ್ಯಾಸಂಗಕ್ಕೂ ಏನೇನೂ ಬಾಧಕವಿಲ್ಲ"

"ನಮ್ಮ ಸಾಹಿತ್ಯ ತರಗತಿಗಳಲ್ಲಿ ಷೇಕ್ಸ್‌ಪಿಯರ್‌ನ ನಾಟಕಗಳ ಕೆಲವು ಭಾಗಗಳನ್ನು ಮಾಡುವುದು ಸಾಧ್ಯವಿಲ್ಲ. 'ಹ್ಯಾಮ್‌ಲೆಟ್' ನಾಟಕದ ಮೂರನೆಯ ಅಂಕದ ಎರಡನೆಯ ದೃಶ್ಯದಲ್ಲಿ ನಾಯಕನಿಗೂ ಒಫೀಲಿಯಾ ಅವಳಿಗೂ ಆಗುವ ಸಂಭಾಷಣೆ, ಮತ್ತು ಅದು ತೀರ ಅಶ್ರಾವ್ಯ ಎಂಬುದು, ಎಲ್ಲರಿಗೂ ಚನ್ನಾಗಿ ತಿಳಿದೇ ಇದೆ. ಇನ್ನೂ ಇಂತಹ ಅವಾಚ್ಯ ದೃಶ್ಯಗಳು ಹಲವಿವೆ. ತಾವು ಭಾಷಾಂತರಮಾಡುವಾಗ ಇವನ್ನು ನೆನಪಿನಲ್ಲಿಡಬೇಕಾಗಿ ಪ್ರಾರ್ಥಿಸುತ್ತೇನೆ.' ಇದು ಕಾಲೇಜಿನ ಕನ್ನಡ ಅಧ್ಯಾಪಕರೊಬ್ಬರ ಪತ್ರ.

"ನಮ್ಮ ಯುವತಿಯರು ಚಾತುರ್ಯದಲ್ಲಿ, ಧೈರ್ಯದಲ್ಲಿ ಯಾರಿಗೂ ಕಡಿಮೆ ಇಲ್ಲ. ಅವರೂ ಆಧುನಿಕ ಸಂಸ್ಕೃತಿಯ ತುಮುಲಕ್ಕೆ ಸಿಕ್ಕಿ ಅವರಾಗಲೆ ಹತೋಟಿ ಮೀರುವ ಸ್ಥಿತಿಗೆ ಬಂದಿದ್ದಾರೆ. ಇದರ ಜತೆಗೆ ಅವರು "ರೋಸಲಿಂಡ್, ಜೂಲಿಯ, ಜೆಸ್ಸಿಕ, ಇವರ ಮೆಲ್ಪಂಕ್ತಿಯನ್ನನುಸರಿಸಿದರೆ ಏನಾಗುವುದೊ ಎಂದು ಭಯವಾಗುತ್ತದೆ." ಹೀಗೆಂದು ಪ್ರೊಫೆಸರ್ ಶಂಕರಮ್ಮನವರು ಬರೆಯುತ್ತಾರೆ.

ನ್ಯಾಯವಿಧಾಯಕ ಸಭೆಯ ತೀವ್ರಗಾಮಿ ಸದಸ್ಯರೊಬ್ಬರು ಹೀಗೆ ಬರೆದಿದ್ದಾರೆ: "ನಮ್ಮ ಜನರು ಸಜ್ಜನರು. ಇವರಿಗೋಸ್ಕರ ನಾವು ತ್ವರೆಯಿಂದ ಮಾಡಬೇಕಾದ ಕೆಲಸ ಯಾವುದು? ಈ ಕ್ಷಣವೆ ಸರ್ಕಾರವು ಒಂದು ಕಾನೂನನ್ನು ಜಾರಿಗೆ ತರಬೇಕು. ಏಕೆಂದರೆ ನಾವು ಕಾನೂನನ್ನೇ ನಂಬಿದ್ದೇವೆ. ನಮಗೆಲ್ಲ ಕಾನೂನಿನ ಮೇಲೆ ಭಾರ ಬಿಡುವುದು ಆಜನ್ಮ ಹಕ್ಕಾಗಿದೆ. ಕಾನೂನಿಲ್ಲದಿದ್ದರೆ ನಾವು ಮುಂದುವರಿಯಲಾರೆವು. ಆದ್ದರಿಂದ ನಾವು ಈಗಲೆ ಒಂದು ಕಾನೂನನ್ನು ಜಾರಿಗೆ ತಂದು, ಅದರ ಮೂಲಕ ಷೇಕ್ಸ್‌ಪಿಯರ್‌ನ ನಾಟಕಗಳನ್ನು ಯಾರು ಎಲ್ಲಿ ಯಾವಾಗಬೇಕಾದರೂ ಓದಬಹುದೆಂದು ಸಮಸ್ತ ಜನಗಳಿಗೂ ತಿಳಿಯಪಡಿಸಬೇಕು. ಪ್ರಕೃತದಲ್ಲಿ ಸರ್ಕಾರವೇ ತಮ್ಮ ವೆಚ್ಚವೆಲ್ಲವನ್ನೂ ವಹಿಸಿಕೊಳ್ಳಬೇಕೆಂದು ಮಸೂದೆಯನ್ನು ನಾನು ಸರ್ಕಾರದ ಮುಂದಿಡುತ್ತೇನೆ."

ತಮ್ಮದೇನಾದರೂ ಇಂಥ ಅಮೂಲ್ಯ ಸಲಹೆಗಳಿದ್ದರೆ ಬೇಡುತ್ತೇನೆ.

—ಬೆ. ಚಂ..

# ಸಣ್ಣ ಕತೆಗಳಿಗೆ ಸುಲಭ ಸೂಚನೆಗಳು

●

## ದೆವ್ವದ ಕತೆ

ಸಣ್ಣ ಕತೆಗಳಲ್ಲೆಲ್ಲಾ ದೆವ್ವದ ಕತೆಯು ಬರೆಯಲು ಬಲು ಸುಲಭ. ಕತಾವಸ್ತುವಾದ ದೆವ್ವವು ಹಲವಾರು ವೇಷಗಳಲ್ಲಿ ಎಲ್ಲೆಲ್ಲೂ ದೊರೆಯುತ್ತದೆ. ಬ್ರಹ್ಮರಾಕ್ಷಸ, ಕೊಳ್ಳಿ ದೆವ್ವ, ಅಂತರ್ ಪಿಶಾಚಿ, ಬಾಣಂತಿ ದೆವ್ವ, ಈ ರೀತಿಯಾಗಿ ಹಲವಾರು ತೆರನಾದವುಗಳಿರುವುವು. ಪಾಳುಬಿದ್ದ ದೊಡ್ಡ ಮನೆಗಳು, ದಟ್ಟವಾಗಿ ಬೆಳೆದ ಹುಣಿಸೆಯ ಮರಗಳು, ಮನೆಯ ಮೇಲಿನ ಗವಾಕ್ಷಿ ಕಿಟಕಿಗಳ ಪಕ್ಕದಲ್ಲಿ, ಕತ್ತಲು ಕತ್ತಲೆಯಾದ ಪ್ರದೇಶಗಳಲ್ಲಿ ಈ ದೆವ್ವಗಳು ವಾಸಮಾಡಿಕೊಂಡಿರುವುವು. ಹಾಗಾಗಿ ಕಥಾನಾಯಕನು ಸಿಗುವುದು ಬಲು ಸುಲಭ.

ದೆವ್ವವು ಸಿಕ್ಕಿತೆಂದರೆ ನಂತರ ಕಥಾವಸ್ತು. ಅಸಂಭವವಾದ ಏನೊಂದು ಘಟನೆಯೂ ದೆವ್ವದ ಕಾರ್ಯಕ್ರಮ. ಅಂದಮೇಲೆ ತೋರಿದ್ದು ನಾವು ಮಾಡಲಾಗದ್ದೆಲ್ಲಾ ಕಥಾವಸ್ತುವೇ. ಕತೆಗಾರನ ಊಹೆಗೆ ಈ ತೆರನಾದ ಕತೆಗಳಲ್ಲಿ ಬೇಕಾದಷ್ಟು ಸೌಕರ್ಯ.

ಕತೆ ಹೇಳುವಾಗ ಕೆಲವು ವಿಷಯಗಳಿಗೆ ಗಮನ ಕೊಡಬೇಕು. ಊರಿನಲ್ಲಿ, ಜನರಲ್ಲಿ, ಸಾಮಾನ್ಯವಾಗಿ ದೆವ್ವದ ವಿಚಾರದಲ್ಲಿ ಕೆಲವು ನಂಬಿಕೆಗಳಿರುತ್ತವೆ. ಅವನ್ನೆಲ್ಲಾ ಕತೆಯಲ್ಲಿ ಉಪಯೋಗಿಸಲೇಬೇಕು ಇಲ್ಲವಾದರೆ ಕತೆಯು ಸುಳ್ಳು ಕತೆಯಂತೆ ಕಾಣಿಸುತ್ತದೆ. ಉದಾ ದೆವ್ವದ ಕಾಲು ಹಿಂದು ಮುಂದಾಗಿರುತ್ತೆ. ದೆವ್ವ ನೆಲದ ಮೇಲೆ ನಿಲ್ಲಲು ಆಗುವುದಿಲ್ಲ. ನೆಲದ ಅರ್ಧ ಅಡಿ ಮೇಲೆ ತೂಗಾಡುತ್ತಿರುತ್ತದೆ. ದೆವ್ವಕ್ಕೆ ಮಾತನಾಡ ಬರುವುದಿಲ್ಲ. ಬರೀ ವಿಕಟ ಶಬ್ದಗಳನ್ನುಂಟುಮಾಡುತ್ತದೆ,—ನಮ್ಮ ಹಳೆಯ ರೇಡಿಯೋ ಹಾಗೆ—ದೆವ್ವದ ಕೂದಲು ಜುಂಗಿನಂತೆ ಕಠಿಣವಾಗಿರುತ್ತದೆ; ದೆವ್ವಗಳಲ್ಲಿ ಕೂಡ ಮದುವೆಗಳು ಉಂಟು. ಗಂಡು ದೆವ್ವವು ಹೆಣ್ಣು ದೆವ್ವಕ್ಕೆ ಹೆದರುತ್ತೆ. ಮರಿ ದೆವ್ವಗಳು ಅಲ್ಲಲ್ಲೇ ಕಾಣಬರುತ್ತವೆ. ದೆವ್ವಕ್ಕೆ ದೇವರ ಮನೆಗೆ ಹೋಗಲು ಶಕ್ತಿಯಿಲ್ಲ. ದೇವರ ಮನೆಯಿಂದ ಹೊರಗೆ ಬರಲು,

ದೆವ್ವವಿದ್ದ ಮನೆಯಲ್ಲಿ, ದೇವರಿಗೂ ಶಕ್ತಿಯಿಲ್ಲ. ದೇವರಿಗೆ ಶಕ್ತಿಇಲ್ಲದಿದ್ದರೂ ಪೂಜಾರಿಗೆ ಶಕ್ತಿಇದೆ ಹೊರಗೆ ಬರಲು. ದೆವ್ವಗಳಿಗೆ ಮದುವೆ ಆಗುವುದಾದರೂ ಮುಂಜೀ ಆಗುವುದಿಲ್ಲ. ಆದಕಾರಣ ಜನಿವಾರವಿರುವುದಿಲ್ಲ. ಅಂದಮೇಲೆ ಅವು ಗಳಿಗೆ ಸಾಬರಂತೆ ಸಾಕ್ಷಾತ್ಕಾರವಿಲ್ಲ. ದೆವ್ವವನ್ನು ಬಿಡಿಸಬೇಕಾದರೆ ದೆವ್ವದಂತೆ ಇರುವವರಿಂದಲೇ ಸಾಧ್ಯ. ದೆವ್ವದಂತೆ ಕುಣಿದಾಡುವವರಿಗೇ ಶಕ್ಯ. ಹೀಗೆಯೇ ಹಲವಾರು ನಂಬಿಕೆಗಳಿರುತ್ತವೆ.

ಕಥಾನಾಯಕನಾಯ್ತು, ಕಥಾವಸ್ತುವಂತೂ ಎಂದೋ ಆಯ್ತು, ಕತೆಯಲ್ಲಿ ಹೇಳಬೇಕಾದ ವಿಷಯಗಳಾಯ್ತು. ಅಂದಮೇಲೆ ಕತೆಯೇ ಆದಂತೆ.
ಮಾದರಿಗಾಗಿ ಒಂದು ಕತೆಯನ್ನು ಹೇಳಿ ಬರೆಸೋಣ.

ಹೆಬ್ಬಿ ಗುಬ್ಬಾಲೆಯಲ್ಲಿ ಒಂದು ದೊಡ್ಡಮನೆ. ಷಹರಿನಲ್ಲಿದ್ದಿದ್ದರೆ ಆ ಮನೆಗೆ ಅರುವತ್ತು ರೂಪಾಯಿ ಬಾಡಿಗೆ ಬರುತ್ತಿತ್ತು. ಆದರೆ ಹಳ್ಳಿಯಲ್ಲಿ ಆ ಮನೆಯ ನ್ನಾರೂ ಕೇಳರು. ಅಲ್ಲದೆ ಮೂವತ್ತು ವರ್ಷಗಳ ಹಿಂದೆ ಆ ಮನೆಯ ಸೊಸೆಯು ಅತ್ತೆಯ ಕಾಟವನ್ನು ತಾಳಲಾರದೆ, ಗಂಡನ ಚಂಡಿತನವನ್ನು ಅನುಭವಿಸಲಾರದೆ, ಮಗು ಹೆತ್ತ ಮೂರುದಿನಗಳಲ್ಲಿಯೇ ಅಕಾಲ ಮರಣಕ್ಕೆ ತುತ್ತಾದಳು. ಅಕಸ್ಮಾತ್ ಮೈಲುತುತ್ತವನ್ನು ತಿಂದು—ಅಂದಿನಿಂದ ಬಾಣಂತಿ ದೆವ್ವವು ಆ ಮನೆಯಲ್ಲಿ ಮೆಟ್ಟಿ ಕೊಂಡಿತ್ತು. ಸಾಯಂಕಾಲವಾದರೆ ಹಾಡಲಾರಂಭಿಸುವುದು, ಮಿದ್ದೆಯಮೇಲ ಕುಣಿಯಲಾರಂಭಿಸುವುದು, ಹೆಣ್ಣು ಹೆಂಗಸರನ್ನು ಕಂಡರೆ ಹುರಿದು ಹಾಕಿಬಿಡು ತ್ತಿತ್ತು. ಹೀಗಾಗಿ ಯಾರೂ ಆ ಮನೆಯಲ್ಲಿ ಬಾಳಲಾರದೆ, ಕಳೆದ ಹತ್ತು ಹದಿನೈದು ವರ್ಷಗಳಿಂದಲೂ ಮನೆಯು ಖಾಲಿಯಾಗಿತ್ತು. ಖಾಲಿಯಾದ ಮನೆಗೆ ಸುಣ್ಣ ಬಳಿ ಸುವರಾರು? ಮನೆಯು ಪಾಳು ಬಿದ್ದಿತ್ತು. ಅಂದರೆ ದೆವ್ವಕ್ಕೆ ಇನ್ನೂ ಅನುಕೂಲ ವಾಯಿತು. ಇದರ ಜತೆಗೆ ಮನೆಯ ಆವರಣದಲ್ಲಿಯೇ ಒಂದು ಹಳೆಯ ಹುಣಿಸೇ ಮರ. ಈ ಮರದಲ್ಲಿ ಒಬ್ಬ ಬ್ರಹ್ಮ ಪಿಶಾಚಿ ಇದ್ದಾನೆಂದು ಎಲ್ಲರಿಗೂ ಗೊತ್ತು. ಮದುವೆಯಲ್ಲಿ ಕಾಶೀ ಯಾತ್ರೆಗೆ ಎಂದು ಹೊರಟ ಸಾತ್ವಿಕ ಬ್ರಾಹ್ಮಣನೊಬ್ಬನು ಹಠಾತ್ತಾಗಿ ಹೃದಯ ವೇದನೆಯಿಂದ ಪೀಡಿತನಾಗಿ ನಡು ರಸ್ತೆಯಲ್ಲಿಯೇ ಒರಗಿದನು. ಹೃದಯ ವೇದನೆಯು ಮದುವೆಯಕಾಲದಲ್ಲಿ ಒಮ್ಮೆಲೇ ಬರಲು, ಅವನೇನು ಮದವ ಣಗಿತ್ತಿಯನ್ನು ಮೊದಲು ನೋಡದೆ ಆಗ ನೋಡಿದನೊ ಏನೊ. ಯಾರಿಗೂ ಕಾರ ಣವು ಚೆನ್ನಾಗಿ ತಿಳಿಯದು. ಈ ಎಳೇ ಬ್ರಹ್ಮ ರಾಕ್ಷಸ ಹುಣಿಸೇ ಮರದಲ್ಲಿ. ಮನೆ ಯಲ್ಲಿ ಹಸೀ ಬಾಣಂತಿ ಪಿಶಾಚಿ. ಇಂತಾಗಿ ಯಾರೂ ಮನೆಯ ಹತ್ತಿರ ಸಾಯಂ ಕಾಲದ ಮೇಲೆ ಸುಳಿದಾಡುತ್ತಿರಲಿಲ್ಲ. ಹಾಗಾಗಿ ಈ ಪಿಶಾಚಿಗಳೂ ಸುಖವಾಗಿ

ಆ ಮನೆಯಲ್ಲೇ ನೆಲೆಸಿಕೊಂಡುಬಿಟ್ಟಿದ್ದುವು. ಅಲ್ಲಿಯೇ ತೂರಾಡುತ್ತಾ ಹಿಂದು ಮುಂದಾಗಿ ನಡೆಯುತ್ತಾ ಕೂದಲು ಕೆದರಿಕೊಂಡು, ಹಾದಿತಪ್ಪಿ ಬಂದವರನ್ನು ಹೆದರಿಸುತ್ತಾ ಕಾಲ ಕಳೆಯುತ್ತಿದ್ದುವು.

ನ. ದೇವಯ್ಯನು ಷಹರಿನ ವಾಸಿ. ನಜ್ಜೆಹಳ್ಳಿಯಲ್ಲಿ ಹುಟ್ಟಿದವನು. ಷಹರಿನಲ್ಲಿ ವಿಮಾವ್ಯವಸಾಯವನ್ನು ಮಾಡುತ್ತಿದ್ದವನು. ಆತನು ಯಾರನ್ನಾದರೂ ಹಿಡಿದನೆಂದರೆ, ಜೇಟಿಯು ವಿಮೆಮಾಡಿ ಹಣವನ್ನು ಕಟ್ಟಿ ಕಟ್ಟಿ ಕಡೆಗೆ ಸತ್ತು ಸುಣ್ಣವಾಗಿ, ವಿಮೆಯ ಹಣವು ಹಿಂದಿರುಗಿ ಬರುವತನಕ ಬಿಡುತ್ತಿರಲಿಲ್ಲ. ಹೀಗಾಗಿ ನ ಎಂದರೆ ನಕ್ಷತ್ರೀಕ ಎಂಬ ಅಡ್ಡ ಹೆಸರು ಅವನಿಗೆ ಬಂದಿತ್ತು. ನಕ್ಷತ್ರೀಕ ದೇವಯ್ಯನಿಗೆ ಯಾರೋ ಎಂದೋ ಹೇಳಿದರು. ಹೆಬ್ಬಿ ಗುಬ್ಬಾಲಿಗೆ ಹೋದರೆ ವಿಮಾ ಜೇಟಿಗಳು ಹೇರಳವಾಗಿ ಸಿಗುತ್ತೆಂದು. ಅವನರಿಯ ಪಾಪ ಹೆಬ್ಬಿ ಗುಬ್ಬಾಲಿಯ ಜನರನ್ನು; ಅವರುಗಳು ಕಾಸಿನ ಮೇಲಿನ ಕಿಲುಬನ್ನು ಕೂಡಿಟ್ಟು ಪುನುಗು ಎಂದು ಮಾರುತ್ತಿದ್ದುದನ್ನು; ಮನೆ ಮಕ್ಕಳಿಗೆಲ್ಲಾ ಬಂಗಾರು, ಚಿನ್ನಯ್ಯ, ತಂಗಮ್ಮ, ಹಣಮಂತಯ್ಯ ಇತ್ಯಾದಿಯಾಗಿ ಹೆಸರಿಡುತ್ತಿದ್ದುದನ್ನು; ಹಣಕ್ಕಾಗಿ ಹಂಬಲಿಸುತ್ತಿದ್ದುದನ್ನು, ಇವೆಲ್ಲವನ್ನೂ ಅರಿಯದೆ ನ. ದೇವಯ್ಯನು ಹೆಬ್ಬಿ ಗುಬ್ಬಾಲಿಗೆ ಹೊರಟನು. ವಿಮಾ ಜೇಟಿಗೆ ಬೇಕಾದ ಸಕಲ ಆಯುಧ ಪತ್ರಗಳನ್ನೂ ಸಿದ್ಧಮಾಡಿಕೊಂಡು ಹೆಬ್ಬಿ ಗುಬಾಲಿಯನ್ನು ಸೇರಿದನು.

ಹೆಬ್ಬಿ ಗುಬ್ಬಾಲಿಯಲ್ಲಿ ಮೊದಲು ಹೇಳಿದ ಪಾಳ ಮನೆಯ ರಸ್ತೆಯ ಇನ್ನೊಂದು ಕೊನೆಯಲ್ಲಿ ಮುಸಾಫರ ಖಾನೆ. ಅಲ್ಲಿ ಹೋಗಿ ಇಳಿದುಕೊಂಡನು. ಬೆಳಗಾಗುತ್ತಲೂ ಹಳ್ಳಿಯ ಪಟೇಲನನ್ನು ಹಿಡಿದು ಅವನ ತಲೆಯನ್ನು ಸಾರಿಸಿ ಗುಡಿಸಿ ರಂಗೋಲಿ ಇಟ್ಟು ಅವನನ್ನು ಬುಟ್ಟಿಗೆ ಹಾಕಿಕೊಂಡನು. ಅವನ ಸಹಾಯದಿಂದ ಇತರರ ಗುರ್ತು ಮಾಡಿಕೊಳ್ಳಲು ಯತ್ನಿಸಿದನು. ಈ ಪ್ರಯತ್ನ ಪಟ್ಟಾಗ ಊರಿನವರು ಹೇಳಿದರು, ಆ ದೆವ್ವದ ಮನೆಯ ಕತೆಯನ್ನು, ಅಲ್ಲಿ ಯಾರೂ ಒಂದು ರಾತ್ರಿ ಸಜೀವವಾಗಿ ಇರಲಾರರೆಂಬುದನ್ನು. ವಿಮಾ ವ್ಯವಸಾಯಿಯು ದೆವ್ವಕ್ಕೆ ಹೆದರುವನೇ? ದೆವ್ವವು ವಿಮಾ ವ್ಯವಸಾಯಿಗೆ ಹೆದರುವುದೇ? ಈ ಪ್ರಶ್ನೆಯು ಈಗ ನಿಷ್ಕರ್ಷೆಯಾಗುವಂತಾಯಿತು. ಏಕೆಂದರೆ ಹಳ್ಳಿಯವರೆಂದರು "ಸ್ವಾಮಿ. ನೀವು ಆ ಮನೆಯಲ್ಲಿ ಒಂದು ರಾತ್ರಿ ಕಳೆದರೆ, ನಾವೆಲ್ಲರೂ ನಿಮ್ಮ ಹತ್ತಿರ ವಿಮೆ ಮಾಡುತ್ತೇವೆಂದು. ನ. ದೇವಯ್ಯನೂ ಒಪ್ಪಿದನು. ಹಳ್ಳಿಯವರ ಮನಸ್ಸಿನಲ್ಲಿ ಈ ರೀತಿಯಾಗಿ ಹಳ್ಳಿಗೆ ಬಂದ ಒಂದು ಗಂಡಾಂತರವು ಕೊನೆಗಾಣುವುದೆಂದು. ನ. ದೇವಯ್ಯನ ಮನಸ್ಸಿನಲ್ಲಿ ಇಷ್ಟು ಸುಲಭವಾಗಿ ಇಷ್ಟೂ ಜನರು ವಿಮೆ ಮಾಡುವರೆಂದು, ಎರಡೂ ಪಕ್ಷದವರೂ ಸಂತೋಷದಿಂದ ಒಪ್ಪಿದರು.

ಕೃಷ್ಣಪಕ್ಷ—ಬ್ಲಾಕ್ ಔಟು ಆದಂತಹ ರಾತ್ರಿ—ಶನಿವಾರ ಸಾಯಂಕಾಲ ಆರು ಗಂಟೆಗೆ ಹಕ್ಕಿಯವರನ್ನು ಬೀಳ್ಕೊಂಡು ತನ್ನ ಸಲಕರಣಗಳೊಂದಿಗೆ ನ. ದೇವಯ್ಯನು ದೆವ್ವದ ಮನೆಯನ್ನು ಹೊಕ್ಕನು. ಒಂದು ಲಾಂದ್ರದ ಬೆಳಕಿನಲ್ಲಿ ತನ್ನ ಕಾಗದಗಳನ್ನು ಓದತೊಡಗಿದನು. ಹಾಗೇಯೇ ನಿದ್ರೆ ಬಂತು ಅಲ್ಲಿಯೇ ಮಲಗಿದನು. ಚೆನ್ನಾಗಿಯೂ ನಿದ್ದೆಬಂತು.

ಮಧ್ಯ ರಾತ್ರಿಯಾದಮೇಲೆ ಯಾರೋ ಇವನನ್ನು ಎಬ್ಬಿಸಿದಂತಾಯಿತು. ನಿದ್ರೆಗಣ್ಣಿನಲ್ಲೇ ಎದ್ದನು. ಇದ್ದ ದೀಪವನ್ನು ದೊಡ್ಡದು ಮಾಡಿದನು. ಸುತ್ತಲೂ ನೋಡಿದರೆ ಯಾರೂ ಇಲ್ಲ. 'ಇರಲಿ. ಎಲ್ಲವನ್ನೂ ಪರೀಕ್ಷಿಸುತ್ತೇನೆ' ಎಂದು ಕೊಂಡು ದೀಪವನ್ನು ಹಿಡಿದುಕೊಂಡು ಕೊಠಡಿ ಕೊಠಡಿಗೂ ಹೋದನು. ಎಲ್ಲೂ ಏನೂ ಇಲ್ಲ. ದೇವರ ಮನೆಗೆ ಹೋದನು. ಅಲ್ಲಿ ಮುರುಕು ಮಂದಾಸನದಲ್ಲಿ ಒಬ್ಬ ವಿಮಾವ್ಯವಸಾಯಿ. ವಿಮಾ ಪತ್ರಿಕೆಗಳನ್ನಿಟ್ಟುಕೊಂಡು ಕೂತಿದ್ದಾನೆ. ನ ದೇವಯ್ಯನಿಗೆ ಸ್ವಲ್ಪ ಗಾಬರಿಯಾಯ್ತು ದೆವ್ವ ಇದೆ ಅಂತ ಮನೆಗೆ ಬಂದಳೆ, ಅಲ್ಲಿ ವಿಮಾ ಏಜಂಟನಿದ್ದರೆ. "ನೀನು ಯಾರಯ್ಯಾ ಇಲ್ಲೇನು ಮಾಡುತ್ತಾ ಇದ್ದಿಯೇ."

ಮಂದಾಸನದಲ್ಲಿದ್ದವನು ಕಣ್ಣೆತ್ತಿ ನೋಡಿದನು. "ನಾನೊಬ್ಬ ವಿಮಾ ವ್ಯವ ಸಾಯಿ. ಈ ಊರಿಗೆ ಕಾರ್ಯದ ನಿಮಿತ್ತ ಬಂದೆ. ಈ ಮನೆಯಲ್ಲಿ ಇಳಿದುಕೊಂಡಿ ದ್ದೇನೆ."

"ಅಯ್ಯೋ ನನಗೆ ತಿಳಿಯಲೇ ಇಲ್ಲವಲ್ಲಾ. ಇಬ್ಬರೂ ಆಗಿನಿಂದಲೂ ಮಾತ ನಾಡುತ್ತ ಕುಳಿತು ಕೊಳ್ಳಬಹುದಾಗಿತಲ್ಲ. ಅದಿರಲಿ ನಿನ್ನ ಹೆಸರೇನು. ಯಾವ ಕಂಪೆನಿ ಕೆಲಸ ಮಾಡುತ್ತಿ?"

"ನನ್ನ ಹೆಸರು ನ. ದೇವಯ್ಯ ಎಂದು. ನಾನು ಷಹರಿನ ಕಂಪೆನಿ ಕೆಲಸ ಮಾಡುತ್ತೇನೆ."

"ಅಯ್ಯೋ ನಾನೂ ನ. ದೇವಯ್ಯ. ನೀನು ಅದೇಹ್ಯಾಗೆ ಆದೆಯಯ್ಯ."

"ಛೀ ನಾನು, ನ. ದೇವಯ್ಯ. ನನಗೆ ಯಾರೋ ಹೇಳಿದ್ದರು. ಈ ಮನೆ ಯಲ್ಲಿ ಒಂದು ಬ್ರಹ್ಮರಾಕ್ಷಸವಿದೆ ಎಂದು. ನೀನೆ ಅದು ಎಂದುಕೊಂಡಿದ್ದೆ ಬೇಕಾ ದರೆ ನಡುಮನೆಗೆ ಹೋಗಿ ಕನ್ನಡಿ ನೋಡಿಕೊ. ಅದರಂತೆಯೇ ಕಾಣಿಸುತ್ತೀ."

ನಡು ಮನೆಗೆ ಹೋದನು. ಕನ್ನಡಿ ನೋಡಿಕೊಂಡನು—ಬ್ರಹ್ಮರಾಕ್ಷಸ ಕನ್ನಡಿಯಲ್ಲಿ—ಅಯ್ಯೋ! ನಾನು ಹೇಗಾದೆ ಬ್ರಹ್ಮರಾಕ್ಷಸ. ಎದೆಯೆಲ್ಲಾ ಹುಡುಕಿ ದರೂ ಜನಿವಾರ ಸಿಗಲಿಲ್ಲ. ಕಾಲು ನೋಡುತ್ತಾನೆ—ತಿರುಗ ಮುರುಗ—ತಲೆಯ ಕ್ರಾಪೆಲ್ಲಾ ಕೆದರಿ ಜುಂಗಾಗಿದೆ. ನಾನು ಬದುಕಿರುವಾಗಲೇ ಬ್ರಹ್ಮರಾಕ್ಷಸ ಆಗ

ಬೇಕೆ. ಸರಿ 'ಅವಶ್ಯ ಮನುಭವ್ಯೋಕ್ತಂ' ಎಂದು ನಾಣ್ಣುಡಿಯನ್ನೆಂದು ಕೊಂಡು ತಿರುಗಿ ಹೋಗಿ ಹುಣಿಸೆಯ ಮರದ ಕೆಳಗೆ ತಣ್ಣಗೆ ಮಲಗಿಕೊಂಡನು.

ಬೆಳಗಾಗುತ್ತಲೂ ಹಳ್ಳಿಯವರೆಲ್ಲಾ ಸಿದ್ಧ—ಇವನ ಕಳೇಬರವನ್ನು ನೋಡಲು—ಎಲ್ಲರೂ ಮನೆಯನ್ನೆಲ್ಲಾ ಹುಡುಕಿದರು. ಯಾರೂ ಇಲ್ಲ. ಆ ವೇಳೆಗೆ ಹುಣಿಸೇಕಾಯಿಯೊಂದು ಇವನ ತಲೆಯ ಮೇಲೆ ಬಿತ್ತು. ಎಚ್ಚೆತ್ತು ಕುಳಿತನು. ಮನೆಯಲ್ಲಿ ಯಾರು ಯಾರೋ ಇದ್ದಂತೆ ಕೇಳಿಸಿತು. ಅಲ್ಲಿಗೆ ಹೋದನು. ಹಳ್ಳಿಯವರೆಲ್ಲರೂ ಅಲ್ಲಿಯೇ ಇದ್ದರು. "ಈಗ ನೀವೆಲ್ಲರೂ ವಿಮೆ ಮಾಡಲೇ ಬೇಕು" ಎಂದು ಅವರಿಗೆ ಒಪ್ಪಂದದ ನೆನಪು ಕೊಟ್ಟನು. ಅವರೆಲ್ಲರೂ ಇವನನ್ನು ನೋಡಿದರು. ಎಲ್ಲಿಂದ ಬಂದ ಎಂಬುದನ್ನು ನೋಡಿದರು. ಹುಣಿಸೇ ಮರದ ಕೆಳಗೆ ಇವನ ಕಾಗದ ಪತ್ರಗಳನ್ನು ಕಂಡರು. ಒಂದೇ ಕಂಠದಿಂದ ಹೇಳಿದರು "ಸಜೀವನಾಗಿ ಒಂದು ರಾತ್ರಿ ಮನೆಯಲ್ಲಿರಬೇಕೆಂದು ಹೇಳಿದೆವು. ನೀನು ಮರದ ಕೆಳಗೆ ಮಲಗಿದೆ. ಯಾದ್ದರಿಂದ ಒಪ್ಪಂದ ಮುರಿದುಬಿತ್ತು."

ಸಪ್ಪೆ ಮುಖ ಹಾಕಿಕೊಂಡು ನ. ದೇವಯ್ಯನು ಷಹರಿಗೆ ಹಿಂತಿರುಗಿದನು. ಬ್ರಹ್ಮರಾಕ್ಷಸನಾಗಿ ರಾತ್ರಿ ಕಳೆದರೂ ಕೂಡ ಈ ಹಾಳ ಹಳ್ಳಿಯವರು ವಿಮೆ ಮಾಡಲಿಲ್ಲವಲ್ಲ ಎಂದು ಮರುಗಿದನು. ಬ್ರಹ್ಮರಾಕ್ಷಸನು ತನ್ನ ವೇಷವನ್ನು ಹಾಕಿಕೊಂಡು ಮುಂದಾಸನದಲ್ಲಿ ಕುಳಿತನೇ ವಿನಹಾ ಆ ಬಾಣಂತಿ ಪಿಶಾಚಿಯು ಎಲ್ಲಿಯೂ ಇರಲಿಲ್ಲವಲ್ಲ ಎಂದು ಕೊರಗಿದನು. ಒಂದಾದರೂ ಸಿದ್ಧಾಂತವಾಯಿತಲ್ಲ, ನಮ್ಮನ್ನು ಕಂಡರೆ ಈ ಪಿಶಾಚಿಗಳೂ ಭಯಗೊಂಡು ರೂಪು ಬದಲಾಯಿಸಿಕೊಳ್ಳುತ್ತವಲ್ಲಾ ಎಂದ ಸಮಾಧಾನ ಪಟ್ಟನು.

---

ಪರೀಕ್ಷಕರಿಗೆ ಕರ್ಕಶವಲ್ಲದಂತಹಾ ಮೃದುನಾಮಧೇಯಗಳಿರಬೇಕು, ಎಂದು ನಮ್ಮ ಸ್ನೇಹಿತರ ಅಭಿಪ್ರಾಯ.

ಈ ನಾಮ ಧೇಯಗಳನ್ನು ಹುಡುಗರೇ ಕೊಡುವರಲ್ಲಾ

*     *     *     *

ಆಧುನಿಕ ಕವಿವರ್ಯನೊಬ್ಬನು ಒಂದು ಬೀಡಿ ಅಂಗಡಿಯನ್ನು ತೆರೆದಿರುವ ಹಾಗಿದೆ.

ಉಪಯುಕ್ತ ಕಾರ್ಯದಲ್ಲಿ ತೊಡಗಿರುವ ಕವಿಗೆ ನಮ್ಮ ವಂದನೆಗಳು.

# ಚಲನ ಚಿತ್ರ ರಂಗಕ್ಕೆ ವರ್ಷದ ಅದ್ವಿತೀಯ ಮತ್ತು ಅಮೂಲ್ಯ ಚಿತ್ರ ರತ್ನಗಳು




ಪಿ. ಯು. ಚಿನ್ನಪ್ಪ, ಟಿ. ಎಸ್. ಬಾಲಯ್ಯ, ಎಂ. ಆರ್. ಸಂತಾನ ಲಕ್ಷ್ಮಿ, ಎ. ಶಕುಂತಲ, ಎನ್. ಎಸ್. ಕೃಷ್ಣನ್, ಟಿ. ಎ. ಮಧುರಂ, ಕಾಳಿ ಎನ್. ರತ್ನಂ ಮತ್ತು ಮೊದಲಾದ ಸುಪ್ರಸಿದ್ಧ ನಟನಟಿಯರು ಅಭಿನಯಿಸಿರುವ

## ಪೃಥ್ವಿರಾಜ್ (ತಮಿಳು)

ವೀರ ರಜಪೂತನ ಶೌರ್ಯ ಸಾಹಸ, ರಜಪೂತ ರಮಣಿಯ ನಿಷ್ಕಳಂಕ ಪ್ರೇಮ ಮತ್ತು ಹಿಂದೂಸ್ಥಾನದ ಹಿಂದಿನ ವೈಭವವನ್ನು ಮನೋರಂಜಿತವಾಗಿ ವಿವರಿಸುವ ಅಮೋಘ ಚಿತ್ರ

ಎನ್. ಎಸ್. ಕೃಷ್ಣನ್, ಎಂ. ಲಕ್ಷ್ಮಣನ್, ಪಿ. ಜಿ. ವೆಂಕಟೇಶನ್, ಕಾಳಿ. ಎನ್. ರತ್ನಂ, ಟಿ. ಎಸ್. ದೊರೈರಾಜ್ ಮತ್ತು ಟಿ. ಎ. ಮಧುರಂ, ಎಂ. ಲಕ್ಷ್ಮಿ, ಟಿ. ಪಿ. ರಾಜಲಕ್ಷ್ಮಿ, ಪಿ. ಟಿ. ರಾಜಕಾಂತಂ, ಟಿ. ಎಸ್. ಜಯ, ಮೊದಲಾದ ಶ್ರೇಷ್ಠ ಕಲಾನಿಧರು ನಟಿಸಿರುವ



## ಉತ್ತಮಿ (ತಮಿಳು)

ಮಾನವನ ಜೀವನದಲ್ಲಿ, ಆದರ್ಶ ಸ್ತ್ರೀಯರ, ಪವಿತ್ರ ಪ್ರೇಮ ತ್ಯಾಗಗಳ ಪ್ರಾಮುಖ್ಯತೆಯನ್ನು ಹೃದಯಂಗಮವಾಗಿ ಚಿತ್ರಿಸುವ ಸಾಮಾಜಿಕ ಚಿತ್ರ.

ಡಿಸ್ಟ್ರಿಬ್ಯೂಟರ್ಸ್ :— (ಮೈಸೂರು ಸಂಸ್ಥಾನ, ಕೊಡಗು ಮತ್ತು ದಕ್ಷಿಣ ಕನ್ನಡ ನಾಡುಗಳಿಗೆ)

**ದಿ ಇಂಡೋ ಫಾರಿನ್ ಫಿಲಂ ಎಕ್ಸ್‌ಛೇಂಜ್,** ೧೫೫, ಸುಬೇದಾರ್ ಛತ್ರಂ ರೋಡ್, ಬೆಂಗಳೂರು ೩೮.

# ಲಗ್ನ-ಪರಿಣಾಮ-ಶೂಲೆ

ಬೇಸಿಗೆಯು ಕಾಲ ಬಂತು ಎಂದರೆ ಮದುವೆಯ ಕಾಲ ಬಂದಹಾಗೆ. ಅದೇನು ವಿಚಿತ್ರವೋ ನೋಡಿ, ಮೈಯೆಲ್ಲಾ ಶಖೆಯಿಂದ ಉರಿಯುವ ಕಾಲದಲ್ಲಿ ಪ್ರಶಸ್ತವಾದ ಲಗ್ನಗಳೂ ದೊರೆಯುತ್ತವೆ. ಮದವಣಿಗನಿಗೆ ಹೀಗೆ ಆಗುವುದು ಪ್ರಕೃತಿ ನಿಯಮವಾದರೂ ಮದುವೆಗೆ ಹೋಗೋರಿಗೂ ಹೀಗೇ ಆಗಬೇಕೇ? ಛಳಿಗಾಲದಲ್ಲಿ ಲಗ್ನಗಳು ಬರುವಂತೆ ಏಕೆ ಮಾಡುವುದಿಲ್ಲ? ಹಿಮಕಾಲದಲ್ಲಿ-ಎಲ್ಲವೂಮಂಜು ಮಂಜಾಗಿ ಕಾಣಿಸುವ ಕಾಲದಲ್ಲಿ—ಮದುವೆ ಮಾಡಿದರೆ ಚೆನ್ನಲ್ಲವೇ, ಮಳೆಗಾಲದಲ್ಲಿ ಕೆಲವು ಸೌಕರ್ಯಗಳು ಇದ್ದೇ ಇರುತ್ತವೆ. ಬರುವವರಿಗೆ ಹೋಗುವವರಿಗೆ ತೊಂದರೆ. ಈ ಕಾಲದಲ್ಲಿ ಮದುವೆಯ ಲಗ್ನಗಳೇಕೆ ದೊರೆಯುವುದಿಲ್ಲ? ಇವೆಲ್ಲವೂ ಪುರಾತನ ಕಾಲದಿಂದ ನಿಯಮಿಸಲ್ಪಟ್ಟಿರುವವು. ಆದ್ದರಿಂದ ಈಗಿನ ಶಾಸ್ತ್ರಿಗಳು ಪುರೋಹಿತರು ಏನೂ ಮಾಡಲಾರದೆ ಬಿಟ್ಟುಬಿಟ್ಟಿದ್ದಾರೆಯೆ?

ಈ ಯೋಚನೆಗಳೆಲ್ಲವೂ ಲಗ್ನಪತ್ರಿಕೆಗಳನ್ನು ನೋಡಿದ ಮೇಲೆ ಬಂದವು. ಈ ವರ್ಷ ಅದೇನು ಕಾರಣವೊ, ಯುದ್ಧದ ಗಲಾಟೆಯಿಂದಲೋ ಮಳೆಬೀಳದೆ ಇರುವುದರಿಂದಲೊ, ಕಾಲೇಜುಗಳನ್ನು ಮುಚ್ಚಿಯೇ ಬಿಡುತ್ತಾರೆ ಕೆಲವು ವರ್ಷಗಳು ಎಂಬ ಸುಸುದ್ದಿಯಿಂದಲೋ, ಏನೋ, ಅಂಜಿಯುವನು ಬಂದ ಎಂದರೆ ನಾಲ್ಕು ಲಗ್ನಪತ್ರಿಕೆ. ಒಂದೇ ದಿನ ನಾಲ್ಕು ಮದುವೆ. ಇವತ್ತು ಮದುವೆ ನಾಳೆ ನೀವು ಬನ್ನಿ ಎನ್ನುವ ಆಹ್ವಾನಗಳು. ಮುಹೂರ್ತ ಮೂರು ಗಂಟೆಗೆ ನೀವು ಮಂಗಳ ವೇಳೆಗೆ ಬರಬೇಡಿ. ಸಾಯಂಕಾಲ ಆರುಗಂಟೆಗೆ ತಂಪು ಹೊತ್ತಿನಲ್ಲಿ ಬಂದುಹೋಗಿ ಎನ್ನುವ ಆಹ್ವಾನಗಳು ಬೇರೆ. ಇನ್ನು ಕೆಲವು ಆಹ್ವಾನಗಳನ್ನು ಮರೆತು ಬರೀ ಊಟದ ಆಹ್ವಾನಗಳೇ ಲಕ್ಕೋಟಿಗಳಲ್ಲಿರುವುವು.

ಈ ಕಡೆಯ ತೆರನಾದ ಆಹ್ವಾನವೊಂದು ನನಗೆ ಬಂತು. ನಾಲ್ಕೂ ಮೂಲೆಯಲ್ಲಿ ಕೆಂಪೇರಿಸಿದ್ದ ಲಕ್ಕೋಟೆ. ಅದರ ಮುಖ ನೋಡಿದರೇ ತಿಳಿಯಿತು—ಮದುವೆಯ ಆಹ್ವಾನ ಎಂದು— ಒಳಗೆ ನೋಡಿದರೆ ಬರೀ ಒಂದು ಕಾರ್ಡು ಇಂತಹ ದಿನ ಇಷ್ಟುಹೊತ್ತಿಗೆ ಊಟಕ್ಕೆ ಬನ್ನಿ ಎಂದು ಸುದ್ದಿ. ಮದುವೆ ಯಾರು ಯಾರಿಗೆ? ಯಾಕೆ? ಎಂದು? ಎಲ್ಲಿ? ಯಾವ 'ಯ' ಕಾರಕ್ಕೂ ಉತ್ತರವಿಲ್ಲ. ಹಾಗೆಯೇ ಯೋಚಿಸಿದೆ. ನಮಗ್ಯಾಕೆ ಇವೆಲ್ಲಾ. ಇಂತಹವನು ಸಾಲಮಾಡಿ ಮದುವೆ ಮದುವೆಮಾಡುತ್ತಾನೆ. ಅನ್ನ ಹಾಕುತ್ತಾನೆ. ನೆಪ ಏನಾದರೇನು? ಸರಿ ನಾವು ಊಟಕ್ಕೆತ್ತಿದ ಕೈನವರು, ನಮಗೆ ಊಟದ ಹೊತ್ತು ಸ್ಥಳ ಮುಖ್ಯವೇ ಹೊರತು ಕಾರಣ'ನೆಪ' ಮುಖ್ಯವಲ್ಲ. ಇದನ್ನರಿತೇ ಈ ತೆರನಾದ ಆಹ್ವಾನವನ್ನು ನಮಗೆ ಕಳುಹಿಸಿದ್ದರು. ನಾನೂ ಆಹ್ವಾ

ನವನ್ನು ಅಂಗೀಕರಿಸಿದೆ. ಅಂದರೆ ಅಂಗಿ ಬಿಚ್ಚಿ ಬರೀ ಬನೀಯನ್ನಿನಲ್ಲಿ ಪಂಚೆ ಹೊದ್ದುಕೊಂಡು ಊಟಕ್ಕೆ ಹೊರಟೆ.

ಕೆಲವು ದಿನಗಳಿಂದಲೂ ನನ್ನ ದೇಹಸ್ಥಿತಿ ಸೋಜಿಗವಾಗಿತ್ತು. ಬಾಯಿಗೆ ತಿಂಡಿ ಬೇಕು. ನಾಲಿಗೆ ನೀರು ಕರೆಯುತ್ತಿತ್ತು, ತಿಂಡಿ ಯೋಚನೆ ಬಂದರೆ.ಆದರೆ ತಿಂದಮೇಲೆ ಹೊಟ್ಟೆ ಸುಮ್ಮನಿರುತ್ತಿರಲಿಲ್ಲ. ವೈದ್ಯರೆಲ್ಲಾ ಹೇಳುತ್ತಾರೆ—ಜೀರ್ಣವಾಗಲು ಆಹಾರವು ಹೊಟ್ಟೆಯಲ್ಲಿ ತಿರುಗ ಮುರುಗ 'ಸುತ್ತುತ್ತೆಂದು, ಗಟ್ಟಿಯಾದ ಆಹಾರವನ್ನು ನೀರಾಗಿಮಾಡಲು ಹೊಟ್ಟೆಯು ಹಿಂದುಮುಂದೂ ಹಿಂಡಾಡುತ್ತೆಂದು,—ಇವೆಲ್ಲವೂ ನನ್ನ ಅನುಭವಕ್ಕೆ ಎಂದೂ ಬಂದಿರಲಿಲ್ಲ. ಆದರೆ ಈಚೀಚೆಗೆ ಇವೆಲ್ಲವೂ ನನಗೆ ತಿಳಿಯುವಂತಾಗುತ್ತಿತ್ತು ಉದಾಹರಣೆಗೆ ಒಂದು ಚಕ್ಕುಲಿ ತಿಂದೆ ಎನ್ನಿ. ಬಾಯಿ ಆ ಫೋರ್ಕ್ಚಕ್ಕುಲಿಯ ಮೇಲೆ ನೀರ್ಗರೆದು ಆ ಚಕ್ಕುಲಿಯನ್ನು ಹೊಟ್ಟೆಗೆ ಕಳುಹಿಸುತ್ತಿತ್ತು. ಹೊಟ್ಟೆಗೆ ಹೋದ ಮೇಲೆ ಹೊಟ್ಟೆ ತಿರುಗುವುದಕ್ಕೆ ಪ್ರಾರಂಭ. ಅಲೆದಾಡಲು ಆರಂಭ. ಕೆಲವು ವೇಳೆ ಹೊಟ್ಟೆಯೇ ಬಾಯಿಗೆ ಬರುತ್ತೋ ಎಂಬ ಯೋಚನೆ. ಇನ್ನೂ ಕೆಲವು ವೇಳೆ ಹೊಟ್ಟೆಗೆ ಹೋದ ಚಕ್ಕುಲಿ ಹಿಂತಿರುಗಿ ಹಿಂದೆ ಬರಲು ಪ್ರಯತ್ನಿಸಿ ಎದೆಯಲ್ಲೇ ಸಿಕ್ಕಿಹಾಕಿಕೊಂಡ ಅನುಭವ. ಇದೂ ತಪ್ಪಿತೆಂದರೆ, ಹಾಳು ಚಕ್ಕುಲಿಯು ಚೂರುಚೂರಾಗಿ ಹೊಟ್ಟೆಗೆ ಹೋದದ್ದು ತಿರುಗಿ ಉಂಡೆ ಚಕ್ಕುಲಿಯಾಗಿ ಹೊಟ್ಟೆಯಲ್ಲಿ ಪುನರ್ಜನ್ಮವೆತ್ತಿ ತನ್ನ ಅರವಂತಿರುವ ದೇಹದಿಂದ ಹೊಟ್ಟೆಯನ್ನು ಕರಕರ ಎಂದು ಕುಯ್ಯಲಾರಂಭಮಾಡುವುದು. ಈ ಗಲಾಟೆಗೆ ವಾಯುದೇವರೇ ಮನೆದೇವರು ಎಂದು ನನ್ನ ಅಭಿಪ್ರಾಯ. ಏಕೆಂದರೆ ಚಕ್ಕುಲಿಯು ಹೊಟ್ಟೆಯನ್ನು ಕುಯ್ಯಲಾರಂಭಿಸಿದರೆ ಸಾಕು, ತೇಗಿನ ಮೇಲೆ ತೇಗು - ಸಣ್ಣ ತೇಗು, ದೊಡ್ಡ ತೇಗು, ಧ್ವನಿಯಡಗಿದ ತೇಗು, ಘರ್ಜಿಸುವ ತೇಗು, ಕಿರಿ ತೇಗು, ಮರಿ ತೇಗು, ಇತ್ಯಾದಿ ತೇಗು, ಆಹಾರದ ಹೋರಾಟ ಮುಗಿಯುವುದಕ್ಕೆ, ಉದರದ ಸಮರ ಶಾಂತಿಯಾಗಲಿಕ್ಕೆ, ಸುಮಾರು ಮೂರು ಗಂಟೆಗಳಾದರೂ ಬೇಕು. ಹೀಗಾದರೂ ಜಿಹ್ವಾಚಾಪಲ್ಯ ಕಡಿಮೆಯಾಗದು. ಆಹಾರದ ಬಾಹುಳ್ಯ ಕಿರಿದಾಗದು.

ಏಕೆ ಹೇಳಲಿಕ್ಕೆ ಬಂದೆ ಎಂದರೆ ಜಿಹ್ವಾಚಾಪಲ್ಯದಿಂದ ನಾನೂ ಊಟಕ್ಕೆ ಹೊರಟೆ. ಕರೆದವರ ಮನಸ್ಸನ್ನು ಕರೆಕರೆಪಡಿಸಬಾರದೆಂದೂ, ಆಹಾರದ ವ್ಯತ್ಯಾಸವಾದರೆ ಹೊಟ್ಟೆಯೂ ಸುಮ್ಮನಾಗುವುದೆಂದೂ ಸಿದ್ಧವಾದೆ ಊಟದ ಹೊತ್ತಿಗೆ ಸರಿಯಾಗಿ.

ಯಥಾಪ್ರಕಾರ ಬಡಿಸಲು ಪ್ರಾರಂಭ. ಅನ್ನ, ಮಜ್ಜಿಗೆ ಹುಳಿ, ತೊವ್ವೆ ಬಡಿಸಿದರು. ಅದನ್ನು ಉಂಡಿದ್ದಾಯಿತು. ಮನೆಯಡಿಗೆಯವರಿಗೆ ನನ್ನ ದೇಹಸ್ಥಿತಿ ಗೊತ್ತಿತ್ತೆಂದು ಕಾಣುತ್ತೆ. ತಿಂದಿದ್ದು ಜೀರ್ಣವಾಗುವ ತನಕ ಸಾರು ಅನ್ನ ತರಲಿಲ್ಲ. ಜೀರ್ಣವಾಯಿತೆಂದು ಅವರಿಗೆ ತೋರಿದ ಮೇಲೆ ಸಾರು ಅನ್ನ ತಂದು

ಬಡಿಸಿದರು. ಅದು ಮುಗಿದ ಮೇಲೆ ತುಪ್ಪ ತಂದರು. ಹೇಗೂ ಜಿಡ್ಡು ಪದಾರ್ಥವು ಪೈಗೊಳ್ಳೆಯುದಲ್ಲ ಎಂದು ಸುಮ್ಮನಾದೆ. ಅದಾದ ಒಂದು ತಾಸಿನಲ್ಲೇ ತಂದರು ಭಕ್ಷ್ಯಗಳನ್ನು. ಅದನ್ನೂ ತಿಂದು ಜೀರ್ಣಿಸಿಕೊಂಡೆ. ಆಗ ತಂದರು ಕೋಸುಂಬರಿಯನ್ನು— ಮಾವಿನಕಾಯಿ ಕೋಸುಂಬರಿ—ಇದರ ಮೇಲೆ ನನಗೆ ಮೋಹ, ಸ್ವಲ್ಪ ಅವಸರದಲ್ಲಿಯೇ ತಿಂದೆನೆಂದು ಹೇಳಬೇಕು. ಏನೇ ಆಗಲಿ ಹೊಟ್ಟೆ ಇದನ್ನೂ ಜೀರ್ಣಿಸಲೆತ್ನಿಸಿದ್ದು ನನಗೆ ವಿಶದವಾಗಿಯೂ ಗೊತ್ತಾಗಹತ್ತಿತು. ಏನಪ್ಪಾ ಆಭಾಸವಾಗುತ್ತೋ ಎನ್ನುವಂತಾಯಿತು. ಮಧ್ಯದಲ್ಲೇ ಎದ್ದುಬಿಡಲೇ ಎನ್ನಿಸಿತು. ಇರಲಿ ಮನಸ್ಸಿನ ಮುಂದೆ ಹೊಟ್ಟೆಗೋಳೇ ಎಂದುಕೊಂಡು ಹಾಗೆಯೇ ಕುಳಿತೆ. ಕಷ್ಟಪಟ್ಟು ಕುಳಿತೆ. ಆಗನೋಡಿ ಹುಳಿಮಜ್ಜಿಗೆ ಅನ್ನ ತಂದು ಬಡಿಸಿದರು. ನಾಲಗೆಯು ನನಗೆ ತಿಳಿಯದಂತೆಯೇ ಕೈಗೆ ಹುಕುಮು ಕೊಟ್ಟಿತು. ಆ ಮಜ್ಜಿಗೆ ಅನ್ನ ತಿಂದೆನೊ ಇಲ್ಲವೋ ಹೊಟ್ಟೆ ಇದ್ದದ್ದೇ ಮರೆತು ಹೋಯಿತು. ಅಷ್ಟು ಹೊತ್ತೂ ಗುರುಗುಟ್ಟುತ್ತಿದ್ದ, ಅಗ್ನಿಪರ್ವತದಂತೆ ಬುಸುಗುಟ್ಟುತ್ತಿದ್ದ ಆ ಉದರವು ಒಮ್ಮೆಲೇ ಶಾಂತವಾಯಿತು. ಪುಸ್ತಕಗಳಲ್ಲಿ ಹೇಳುವಂತ 'ಥಂಡಾ' ಆಗಿ ಹೋಗಿಬಿಡ್ತು. ಊಟವಾಯಿತು ಸುಖವಾಗಿ ಮೇಲಕ್ಕೆದ್ದೆ. ಕೆಲಕಾಲ ಎಲಡಿಕೆ ಹಾಕಿಕೊಳ್ಳುತ್ತಾ ಅಲ್ಲಿಯೇ ಇದ್ದು ಮನೆಗೆ ಹಿಂತಿರುಗಿದೆ. ಮನೆಗೆ ಬಂದು ಸ್ವಲ್ಪಕಾಲ ಮಲಗಿದೆ. ಎದ್ದೆ. ಕುಳಿತೆ. ನಿಂತೆ. ಓಡಾಡಿದೆ. ಥಟಕ್ಕನೆ ಕುಳಿತೆ. ಹೊಟ್ಟೆಗೆ ತಿಳಿಯದಂತೆ ಎದ್ದೆ. ಏನೇನು ಮಾಡಿದರೂ ಹೊಟ್ಟೆಯು ಸುಳಿವೇ ಇಲ್ಲ. ಇದೇನು? ಜೀರ್ಣಶಕ್ತಿಯೇ ಹೋಗಿಬಿಡತೋ, ಹೊಟ್ಟೆಯು ಹುಟ್ಟಡಗಿ ಹೊಯ್ತೊ? ಏನೂ ಅರಿವೇ ಇಲ್ಲವಲ್ಲ ಎನ್ನುವಂತಾಯ್ತು.

ಆಗ ಹೊಳೆಯಿತು ನೋಡಿ ಹೊಟ್ಟೆನೋವಿನ ಔಷಧಿ. ಮದುವೆ ಮನೆಗೆ ಊಟಕ್ಕೆ ಹೋಗಿ. ಮದುವೆಗೆ ಹೋಗಬೇಡಿ. ಊಟ ಬಿರಿಯಾ ಉಂಡನಂತರ ಕೋಸುಂಬರಿ—ಮಾವಿನಕಾಯಿ ಕೋಸುಂಬರಿ ತಿನ್ನಿ—ಮಜ್ಜಿಗೆ ಅನ್ನದಲ್ಲಿ ಮುಕ್ತಾಯಮಾಡಿ. ಹೊಟ್ಟೆ, ನೋವು ಹಾಳಾಗಿ ಹೋಗುತ್ತೆ.

# ಕ್ರಿಕೆಟ್

ಆಂದಿನ ಮ್ಯಾಚು ಎಂದಿನ ಹಾಗಿರಲಿಲ್ಲ. ಪ್ರಾರಂಭದಲ್ಲೂ ನಡು ನಡುವೆಯೂ ಕಟ್ಟಕಡೆಯ ಫಲಿತಾಂಶದಲ್ಲೂ ಈ ಮ್ಯಾಚಿನ ರೀತಿಯೇ ಬೇರೆ- ಅದರ ಸೋಜಿಗವೇ ಚಿರಸ್ಮರಣೀಯವಾದದ್ದು. "ಕ್ರೀಡಾಭರ್ವ" ಹೋಟಲಿನ ಮಾಲೀಕರವರ ದ್ವಿತೀಯ ಪುತ್ರನ ವಿವಾಹದ ಸ್ಮಾರಕಕ್ಕಾಗಿ ಏರ್ಪಟ್ಟ ಪಂದ್ಯದ ಫೈನಲ್ಸ್ ಆಟ-ಅಂದು! ಇಂತಹ ಪಂದ್ಯ ಈದುವರೆಗೂ ಹಿಂದೂಸ್ತಾನದಲ್ಲೇ ನಡೆದಿರಲಿಲ್ಲ. ಮಗನ ಮದುವೆಯ ದಿನ ಕ್ರಿಕೆಟ್ಟು ಆಟಕ್ಕಾಗಿ ಒಂದು ಬೆಳ್ಳಿ ಕಪ್ಪನ್ನು ತೆಗೆದಿಡುವ ಪುಣ್ಯಾತ್ಮರು ನಮ್ಮಲ್ಲಿ ಇನ್ನೂ ಅತಿ ವಿರಳ. ಅಲ್ಲದೆ, ಉಭಯ ಪಕ್ಷಗಳ ನಾಯಕರನ್ನೂ ಬೀಗರೇ ಚುನಾಯಿಸಬೇಕೆಂದು ಪಂದ್ಯದ ವ್ಯವಸ್ಥೆಯಲ್ಲೇ ಇದ್ದುದರಿಂದ ಆ ಗೌರವಕ್ಕಾಗಿ ಹುಡುಗರ ತಂದೆಯವರೂ ಅವನ ಮಾವನವರೂ ಆಟಗಾರರಿಗೆ ಭೇಟಿ ಕೊಟ್ಟು ಕಡೆಗೆ ಪಂದ್ಯಕ್ಕೆ ಹತ್ತು ನಿಮಿಷಗಳಿದ್ದಾಗ "ಫಸ್ಸಿ" ಅವರನ್ನೂ, "ಗರೂಡ್"ರವರನ್ನೂ ಆರಿಸಿದ್ದು ಆಶ್ಚರ್ಯವೇ ಸರಿ ಎಂದು ಎಲ್ಲರೂ ಅಭಿಪ್ರಾಯಪಟ್ಟರು.

ಕೆಂಪು ಕಾಲೇಜಿನ ಹಿಂದಿನ ಮೈದಾನದಲ್ಲಿ ಸುಮಾರು ಎರಡು ಸಾವಿರ ಮಂದಿಯ ಮುಂದೆ ಪರಿಶುದ್ಧವಾದ ವಿಕೆಟ್ಟಿನ ಮೇಲೆ ಪ್ರಾರಂಭವಾಯಿತು. ಬೆಂಗಳೂರು ಟೀಮಿನವರು ಆಡಿ ನಾಲ್ಕು ವಿಕೆಟ್ಟುಗಳಿಗೆ ೪೫೪ ರನ್ನುಗಳನ್ನು ಶೇಖರಿಸಿದರು. ಇದು ಆ ದಿನದ ಒಂದು ವಿಶೇಷ ಸಾಹಸ. ೪ ವಿಕೆಟ್ಟುಗಳಿಗೆ ೪ ರನ್ನುಗಳನ್ನು ಇದೇ ಟೀಮಿನವರು ಹಿಂದೆ ಆಡಿ ಕೀರ್ತಿಯನ್ನು ಗಳಿಸಿದ್ದರು; ಹಾಗೆಯೇ ೪ ವಿಕೆಟ್ಟುಗಳಿಗೆ ೫ ರನ್ನುಗಳನ್ನು ಶೇಖರಿಸಿರುವ ಟೀಮುಗಳೂ ಭಾರತದಲ್ಲಿ ಇರಬಹುದು. ಆದರೆ, ೪೫೪ ಅಂದರೆ, ಅದು ಒಂದು ರಿಕಾರ್ಡೇ ಸರಿ!

ಕ್ಯಾಪ್ಟನ್‌ರವರಾದ "ಫಸ್ಸಿ"ಯವರು ಮೊದಲನೆಯ ಮೂರು ಓವರುಗಳಲ್ಲಿ ಒಂದೇ ಒಂದು ಸಲ ಚೆಂಡನ್ನು ಹೊಡೆದು ಒಂದೇ ಒಂದು ರನ್ನನ್ನೂ ಕೂಡ ಸಂಪಾದಿಸಿರಲಿಲ್ಲ. ಕೆಂಪು ಕಾಲೇಜಿನ ಮೈದಾನದಲ್ಲಿ ಅವರು ಎಂದೂ ಇಷ್ಟು ತಾಳ್ಮೆಯಿಂದ ಆಡಿದ್ದೇ ಇಲ್ಲ. ಆದ್ದರಿಂದ, ಆ ಹೊಡೆತವನ್ನೂ ರಿಕಾರ್ಡುಗಳ ಪಟ್ಟಿಗೆ ಸೇರಿಸಲಾಯಿತು. ಹಿಂದೊಂದು ಸಲ, ಅಂದರೆ ೧೯೩೦ರಲ್ಲಿ, ಎಮ್ಮೆ ನಾರಾಯಣ್‌ರವರು ಇದೇ ರೀತಿ ಮೂರು ಓವರುಗಳಲ್ಲಿ ಒಂದೇ ಒಂದು ಮೂಗು ಪೆಟ್ಟನ್ನು ಕೊಟ್ಟಿದ್ದರು! ಆದರೆ, "ಫಸ್ಸಿ"ಯವರ ಕೀರ್ತಿಗೆ ಇದರಿಂದ ಏನೂ ಕಳಂಕ ತಗಲುವುದಿಲ್ಲ. ಏಕೆಂದರೆ, ಅವರು ಎಡಗೈಯವರು! ಎಮ್ಮೆನಾರಾಯಣ್ ಕೇವಲ ಬಲಗೈಯವರು!

ಮೈಸೂರಿನವರ ಭೀಮಬೋಲರಾದ, "ಕನ್ನಡದ ಕ್ಲಾರ್ಕ್" ಎಂಬ ಬಿರುದಾಂಕಿತ, "ಹನೂ"ರವರ ಕೈಗೆ ಏಟು ಬಿದ್ದು ಅವರು ಚಪ್ಪರಕ್ಕೆ ಹಿಂತಿರುಗಿದ್ದೂ ಕೂಡ ಒಂದು ನವನವೀನ ದುರಾದೃಷ್ಟ! ಒಂದು ಹೊಸ ರಿಕಾರ್ಡ್! ಅಷ್ಟು ಹೊತ್ತಿಗೆ ಹನೂರವರ ಸರಾಸರಿ ಲೆಕ್ಕ ಇನ್ನಿಂಗ್ಸಿಗೆ ೧೪೬.೫ ಊ, ವರ್ಷದ ಎಲ್ಲಾ ಮ್ಯಾಚುಗಳನ್ನೂ ಸೇರಿಸಿದರೆ ೧೪೬.೩ ಊ ಆಗಿತ್ತು. ಆದ್ದರಿಂದ ನೋಟಕರಾದ ನೂರಾರು ಬೀಸಣಿಗೆಗಳು "ಹುಷಾರಿ ಹನೂ," "ಹುಷಾರಿ ಹನೂ" ಎಂದು ಕೂಗಿಗೊಂಡರು. ಅದನ್ನು ಕೇಳಿದ ಹನು ಚೆಂಡನ್ನು ಹಠಾತ್ತಾಗಿ ಹಿಡಿದುಕೊಳ್ಳಲು ಪ್ರಯತ್ನಿಸಿ ಬೆರಳನ್ನು ಕತ್ತರಿಸಿಕೊಂಡು ಆಸ್ಪತ್ರೆಗೆ ಹೋದ.

ಘಸ್ಸಿಯವರು ಚಪ್ಪರಕ್ಕೆ ಹಿಂತಿರುಗಿದ ಮೇಲೆ ಗರೂಡ್‌ರ ಬೋಲಂಗಿನಲ್ಲಿ ಮೂರುಸಾರಿ ಸೊನ್ನೆ ಓವರುಗಳು ಬಂದವು. ಅದೂ ಒಂದು ರಿಕಾರ್ಡೇ. ಏಕೆಂದರೆ ಹಿಂದೆ ಅದೇ ಮೈದಾನದಲ್ಲಿ ಅವರು ಇದೇ ರೀತಿ ಬೋಲ್ ಮಾಡಿದಾಗ ಎರಡುಸಾರಿ ಪೂರ್ವದ ತುದಿಯಿಂದಲೂ ಒಂದುಸಾರಿ ಪಶ್ಚಿಮದ ತುದಿಯಿಂದಲೂ ಬೋಲ್ ಮಾಡಿದ್ದರು. ಆ ದಿನದ ಆಟದಲ್ಲಿ ಅವರಿಗೆ ಲಭಿಸಿದ ಸೊನ್ನೆ ಓವರುಗಳು ಎರಡುಸಾರಿ ಪಶ್ಚಿಮದ ತುದಿಯಿಂದಲೂ ಒಂದುಸಾರಿ ಪೂರ್ವದ ತುದಿಯಿಂದಲೂ ಬೋಲು ಮಾಡಿದರು. ಆದ್ದರಿಂದ ಅದನ್ನೂ ಒಂದು ಹೊಸ ಸಾಹಸವೆಂದು ಕ್ರಿಕೆಟ್ ಶಾಸ್ತ್ರಜ್ಞರು ಪರಿಗಣಿಸಲು ಒಪ್ಪಿದರು.

ಅಲ್ಲದೆ ಆ ದಿನದ ಆಟದಲ್ಲಿ ಇನ್ನೂ ಅನೇಕ ಹೊಸ ರಿಕಾರ್ಡುಗಳನ್ನು ಸ್ಥಾಪಿಸಲಾಯಿತು. ಇದರಿಂದ ಉಭಯಪಕ್ಷದವರ ಕೀರ್ತಿಯೂ, ಕ್ರೀಡಾತರುಣರ ಪ್ರಪಂಚದಲ್ಲಿ ಅಮರಜ್ಯೋತಿಯಿಂದ ಬೆಳಗಿತು. ಕುಮಾರು ಎಂಬ ಆಟಗಾರರು ಮೂವತ್ತು ಸಾರಿ ದಂಡಲ್ಲದ ಚಂಡನ್ನು ಬೋಲು ಮಾಡಿದ್ದು ಬುದ್ಧಿಯಿಲ್ಲದ ಜಾಗದಲ್ಲಿ ಇದ್ದವರನ್ನು ಆರುಸಾರಿ ಚಂಡನ್ನು ಅರೆ ಹಿಡಿದದ್ದು, ಐದನೆಯ ಸಾಲುಗಾರಿಕೆಯಲ್ಲಿ ಐದು ರನ್ನುಗಳನ್ನು ಸಂಪಾದಿಸಿದ್ದು ಅಂಪೈರಿನ ತಲೆಗೆ ಆರು ಜನ ಆಟಗಾರರು ಏಕಕಾಲದಲ್ಲಿ ಟೋಪಿ ಹಾಕಿದ್ದು—ಇತ್ಯಾದಿ, ಇತ್ಯಾದಿ ವರ್ಣಿಸಲಸದಳವಾದ ರಿಕಾರ್ಡುಗಳನ್ನು ಕೆಂಪು ಕಾಲೇಜಿನ ಹಿಂದಿನ ಮೈದಾನದಲ್ಲಿ ಸ್ಥಾಪಿಸಲಾಯಿತು.

---

'ಬಾಂಬುಗಳು ತಲೆಯ ಮೇಲೆಯೇ ಬಿದ್ದರೆ ಏನುಮಾಡಬೇಕು' ಎಂದು ವಾಚಕರೊಬ್ಬರ ಪ್ರಶ್ನೆ.

—ನೀವು ಏನೂ ಮಾಡಬೇಕಾಗಿಲ್ಲ. ಸಮಾಜದವರು ಮುಂದಿನ ಕೆಲಸ ಮಾಡುತ್ತಾರೆ.

# ಸಾಗರ್ ಟಾಕೀಸ್, ಬೆಂಗಳೂರು

## ತಾ|| ೨೧-೫-೪೨ರಿಂದ ಅಮೋಘ ಪ್ರಾರಂಭ

ಸಾರಥಿ ಫಿಲ್ಮ್ಸ್‌ರವರ



ನಟವೃಂದ:

**ಕೆ.ಎಸ್. ಪ್ರಕಾಶರಾವ್ - ಕುಟುಂಬರಾವ್**

**ಪುಷ್ಪೇಂದ್ರಮಣಿ - ಹೈಮವತಿ**

ಮುಂತಾದವರು.

ದಿಗ್ದರ್ಶಕರು:
**ಜಿ. ರಾಮಬ್ರಹ್ಮಂ**

ಸ್ಟುಡಿಯೋ:
**ನ್ಯೂ ಟೋನ್**

Distributors: **SARASWATHI TALKIES LTD.,**
BEZWADA - BANGALORE CITY.

# ಮಣ್ಯಾಂ ಕಂಪನಿಯವರ ತಯಾರಿಕೆಗಳು




ಮಣ್ಯಾಂ ಕಂಪನಿಯವರ ಸ್ನೋ, ಹೇರ್ ಆಯಿಲ್ ಮತ್ತು ಸೋಪ್ ಕರ್ನಾಟಕದಲ್ಲೆಲ್ಲ ಪ್ರಸಿದ್ಧಿ ಪಡೆದಿವೆ. ಅನೇಕ ವಸ್ತು ಪ್ರದರ್ಶನಗಳಲ್ಲಿ ಪ್ರಶಸ್ತಿಗಳನ್ನು ಪಡೆದಿವೆ. ಸೌಂದರ್ಯೋಪಕರಣಗಳಲ್ಲಿ ಇವಕ್ಕೆ ಮಿಗಿಲೆನಿಸುವವು ಬೇರೆ ಯಾವವೂ ಇಲ್ಲ ಎನಿಸಿಕೊಂಡಿವೆ. ಒಂದು ಸಾರಿ ಪರೀಕ್ಷಿಸಿ ನೋಡಿ, ತಾನೇ ತಿಳಿಯುತ್ತೆ !!




## ಮಣ್ಯಾಂ ಅಂಡ್ ಕಂಪನಿ, ಮದ್ರಾಸು.

Printed at : Prajamata Power Press, Bangalore City and Published by :